CPMG / KA / BG-GPO/13 / 2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೦೫ (ಮಾಘ ೨೧, ಶಕ ವರ್ಷ ೧೯೨೬) | ಸಂಚಿಕೆ ೬ |
|---|---|---|


## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 52 ರಾಶಾಪ್ರ 2004, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2005**

ಕರ್ನಾಟಕ ಗಿರವಿದಾರರ ಅಧಿನಿಯಮ, 1961 ಮತ್ತು ಕರ್ನಾಟಕ ಗಿರವಿದಾರರ ನಿಯಮಗಳು, 1966 (1966ರ 30)ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಗಿರವಿದಾರರ ಅಧಿನಿಯಮ, 1961**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

16ಎ. ಗಿರವಿದಾರನು ಒತ್ತೆಗಳನ್ನು ಬಿಡಿಸಿಕೊಳ್ಳತಕ್ಕದ್ದು.
17. ಗಿರವಿ ಇಟ್ಟವರ ಕೆಲವು ಕಾರ್ಯಗಳು ದಂಡನೀಯವಾಗತಕ್ಕದ್ದು.
18. ಅಧಿನಿಯಮದ ಉಲ್ಲಂಘನೆಗಾಗಿ ಸಾಮಾನ್ಯ ದಂಡನೆ, ಇತ್ಯಾದಿ.
19. ಅಪರಾಧಗಳನ್ನು ಅಧಿವಿಚಾರಣೆ ಮಾಡಲು ಅಧಿಕಾರ ವ್ಯಾಪ್ತಿ.
19ಎ. ಹಿಂದೂ ಅವಿಭಕ್ತ ಕುಟುಂಬ, ಕಂಪನಿಗಳು, ಇತ್ಯಾದಿಗಳಿಂದ ಅಪರಾಧಗಳು.
20. ಕೆಲವು ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದು.
21. ಗಿರವಿಯ ಕರಾರು ಕೆಲವು ಸಂದರ್ಭಗಳಲ್ಲಿ ಅನೂರ್ಜಿತವಾಗತಕ್ಕದ್ದು ಮತ್ತು ಕೆಲವು ಇತರ ಸಂದರ್ಭಗಳಲ್ಲಿ ಅನೂರ್ಜಿತವಾಗತಕ್ಕದ್ದಲ್ಲ.
22. ನಿಯಮ ರಚನಾಧಿಕಾರ.
23. ಉಳಿಸುವಿಕೆಗಳು.
24. ನಿರಸನ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**I**

**1962ರ ಅಧಿನಿಯಮ 13:-** ಮದರಾಸು ಗಿರವಿದಾರರ ಅಧಿನಿಯಮ, 1943 ಇದು ಮದರಾಸು ಪ್ರದೇಶದಲ್ಲಿ ಜಾರಿಯಲ್ಲಿದೆ. ಇತರ ಪ್ರದೇಶಗಳಲ್ಲಿನ ಗಿರವಿದಾರರನ್ನು ಆಯಾ ಪ್ರದೇಶಗಳಲ್ಲಿ ಪ್ರಸ್ತುತ ಜಾರಿಯಲ್ಲಿರುವ ಲೇವಾದೇವಿದಾರರ ಅಧಿನಿಯಮದ ಮೂಲಕ ವಿನಿಯಮಿಸಲಾಗುತ್ತಿದೆ. ಆದಾಗ್ಯೂ, ಲೇವಾದೇವಿದಾರರ ಸಲುವಾಗಿ ಮಾಡಬೇಕಾದ ಉಪಬಂಧಗಳು ಮತ್ತು ಗಿರವಿದಾರರ ಸಲುವಾಗಿ ಮಾಡಬೇಕಾದ ಉಪಬಂಧಗಳು ಒಂದೇ ಆಗಿಲ್ಲವೆಂದು ಸೂಕ್ಷ್ಮ ಪರಿಶೀಲನೆಯ ತರುವಾಯ ಕಂಡುಬಂದಿದೆ. ಆದ್ದರಿಂದ, ರಾಜ್ಯದಲ್ಲಿ ಗಿರವಿದಾರರ ವಿನಿಯಮನಕ್ಕೂ ಮತ್ತು ನಿಯಂತ್ರಣಕ್ಕೂ ಪ್ರತ್ಯೇಕ ಶಾಸನವನ್ನು ಅಧಿನಿಯಮಿಸುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಎಲ್.ಸಿ. ಸಂಖ್ಯೆ: 3221 ದಿನಾಂಕ:21ನೇ ಮಾರ್ಚ್, 1959 ಇದರಿಂದ ಪಡೆಯಲಾಗಿದೆ. ಭಾಗ-IV, 2ಎ, ಪುಟ ಸಂಖ್ಯೆ: 141ರಲ್ಲಿ ಪ್ರಕಟಿಸಲಾಗಿದೆ).

**II**

**1979ರ ತಿದ್ದುಪಡಿ ಮಾಡುವ ಅಧಿನಿಯಮ 29:-** 29ನೇ ಮಾರ್ಚ್, 1962ರಿಂದ ಜಾರಿಗೆ ತರಲಾಗಿದ್ದ, ಕರ್ನಾಟಕ ಗಿರವಿದಾರರ ಅಧಿನಿಯಮ, 1962 ಇದನ್ನು ಕಾರ್ಯಗತಗೊಳಿಸುವ ಕ್ರಮದಲ್ಲಿ ಬೆಳಕಿಗೆ ಬಂದ ಸಂಗತಿಯೆಂದರೆ ಕೆಲವರು ಗಿರವಿದಾರರು ತಮ್ಮಲ್ಲಿ ಒತ್ತೆ ಇಡಲಾದ ವಸ್ತುಗಳನ್ನು ಹಣಕಾಸಿನ ಲಾಭ ಪಡೆಯುವುದಕ್ಕಾಗಿ ವಾಣಿಜ್ಯ ಬ್ಯಾಂಕುಗಳಲ್ಲಿ ಒತ್ತೆ ಇಡುವ ಮತ್ತು ಹಾಗೆ ತೆಗೆದುಕೊಂಡ ಹಣವನ್ನು ತಮ್ಮ ಲೇವಾದೇವಿ ವ್ಯವಹಾರಕ್ಕೆ ಬಳಸಿಕೊಂಡು ಹೆಚ್ಚಿನ ಬಡ್ಡಿ ವಿಧಿಸುವ ರೂಢಿ ಮಾಡಿಕೊಂಡಿದ್ದಾರೆ. ಆದ್ದರಿಂದ, ಗಿರವಿದಾರರು ಅಳವಡಿಸಿಕೊಂಡ ಈ ರೂಢಿಯನ್ನು ಈ ಅಧಿನಿಯಮದ ಉಪಬಂಧಗಳ ವ್ಯಾಪ್ತಿಯೊಳಗೆ ತರುವುದಕ್ಕಾಗಿ ಅಧಿನಿಯಮದ ಸಂಬಂಧಪಟ್ಟ ಉಪಬಂಧವನ್ನು ತಿದ್ದುಪಡಿ ಮಾಡುವುದು ಅಗತ್ಯವಾಯಿತು.

ಆದ್ದರಿಂದ ಈ ವಿಧೆಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 3ನೇ ಫೆಬ್ರವರಿ, 1979ರಲ್ಲಿ ಸಂಖ್ಯೆ 114 ಪುಟ ಸಂಖ್ಯೆ: 5ರಲ್ಲಿ ಪ್ರಕಟಿಸಲಾಗಿದೆ).

**III**

**1985ರ ತಿದ್ದುಪಡಿ ಮಾಡುವ ಅಧಿನಿಯಮ 40:-** ಲೈಸೆನ್ಸ್ ಪಡೆದ ಗಿರವಿದಾರರಿಂದ ಸಾಲ ಪಡೆಯುವ ವ್ಯಕ್ತಿಗಳು ಬೆಲೆ ಬಾಳುವ ಚಿನ್ನದ ಆಭರಣಗಳು ಮತ್ತು ಇತರ ವಸ್ತುಗಳನ್ನು ಒತ್ತೆ ಇಡುತ್ತಾರೆ. ಆದ್ದರಿಂದ ಗಿರವಿ ಇಡುವವರ ಹಿತಾಸಕ್ತಿಗಳ ರಕ್ಷಣೆಗೆ ಅಂಥ ಲೈಸೆನ್ಸ್ ಪಡೆದ ಗಿರವಿದಾರರು ಭದ್ರತಾ ಠೇವಣಿ ಇಡುವಂತೆ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಅಧಿನಿಯಮವನ್ನು ನಿರ್ವಹಿಸುವಲ್ಲಿ ತಗಲುವ ಹೆಚ್ಚಿನ ವೆಚ್ಚವನ್ನು ಭರಿಸಲು ಲೈಸೆನ್ಸ್ ಶುಲ್ಕವನ್ನು ಸಹ ಹೆಚ್ಚಿಸಬೇಕೆಂದು ಪ್ರಸ್ತಾವಿಸಲಾಗಿದೆ.

ಈ ವಿಷಯವು ತುಂಬಾ ತುರ್ತಿನದಾಗಿದ್ದುದರಿಂದ ಕರ್ನಾಟಕ ಗಿರವಿದಾರರ (ತಿದ್ದುಪಡಿ) ಅಧ್ಯಾದೇಶ, 1985 (1985ರ ಕರ್ನಾಟಕ ಅಧ್ಯಾದೇಶ ಸಂ. 12) ಇದನ್ನು ಹೊರಡಿಸಲಾಗಿತ್ತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ: 24ನೇ ಜುಲೈ 1985ರಲ್ಲಿ ಸಂಖ್ಯೆ:398 ಪುಟ ಸಂಖ್ಯೆ: 6ರಲ್ಲಿ ಪ್ರಕಟಿಸಲಾಗಿದೆ).

**IV**

**1998ರ ತಿದ್ದುಪಡಿ ಮಾಡುವ ಅಧಿನಿಯಮ 9:-** ಕರ್ನಾಟಕ ಗಿರವಿದಾರರ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ 13) ಇದನ್ನು ಈ ಮುಂದಿನ ಕಾರಣಗಳಿಗಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:-

(i) ಲೈಸೆನ್ಸ್ ಅವಧಿಯನ್ನು ಒಂದು ವರ್ಷದಿಂದ ಐದು ವರ್ಷಗಳಿಗೆ ಹೆಚ್ಚಿಸುವುದು;

(ii) ಭದ್ರತಾ ಠೇವಣಿಯ ಮೊತ್ತವನ್ನು ಸಾಲ ನೀಡಲಾದ ಮೊತ್ತಗಳ ಮೇಲೆ ಲೆಕ್ಕ ಹಾಕದೆ ತೊಡಗಿಸಲಾದ ಮೊತ್ತಗಳ ಮೇಲೆ ಲೆಕ್ಕ ಹಾಕುವಂತೆ ಉಪಬಂಧ ಕಲ್ಪಿಸುವುದು;

(iii) ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 8912/85ರಲ್ಲಿ ಮತ್ತು ಇತರ ಸಂಬಂಧಪಟ್ಟ ವಿಷಯಗಳಲ್ಲಿ ಭದ್ರತಾ ಠೇವಣಿಯ ಮೇಲೆ ಬಡ್ಡಿ ಸಂದಾಯ ಮಾಡುವಂತೆ ಸರ್ಕಾರಕ್ಕೆ ನಿರ್ದೇಶನ ನೀಡಿರುವುದರಿಂದ ಮತ್ತು ಬಡ್ಡಿ ಸಂದಾಯ ಮಾಡುವುದನ್ನು ನಿಷೇಧಿಸುವ ಯಾವುದೇ ನಿರ್ದಿಷ್ಟ ಉಪಬಂಧ ಇಲ್ಲದಿರುವುದರಿಂದ ಈ ನ್ಯೂನತೆಯನ್ನು 1985ರ ಮೇ 31 ರಿಂದ ಪೂರ್ವಾನ್ವಯವಾಗುವಂತೆ ತೆಗೆದುಹಾಕಲು ಮತ್ತು ಆ ಪ್ರಕರಣಕ್ಕೆ ಮಾನ್ಯತೆ ನೀಡಲು ಸೂಕ್ತ ಉಪಬಂಧಗಳನ್ನು ರಚಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ-IV, 2ಎ ದಿನಾಂಕ:2ನೇ ಸೆಪ್ಟೆಂಬರ್, 1997ರಲ್ಲಿ ಸಂಖ್ಯೆ: 990 ಪುಟ ಸಂಖ್ಯೆ:4ರಲ್ಲಿ ಪ್ರಕಟಿಸಲಾಗಿದೆ.)

[1][**1962ರ ಕರ್ನಾಟಕ ಅಧಿನಿಯಮ**][1] **ಸಂಖ್ಯೆ 13**

(1962ರ ಮಾರ್ಚ್ ಇಪ್ಪತ್ತೊಂಭತ್ತನೇ ದಿವಸದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟವಾಯಿತು.)

[1][**ಕರ್ನಾಟಕ**][1] **ಗಿರವಿದಾರರ ಅಧಿನಿಯಮ, 1961**

(1962ರ ಮಾರ್ಚ್ ಎಂಟನೇ ದಿವಸದಂದು ರಾಷ್ಟ್ರಪತಿಯ ಅನುಮತಿಯನ್ನು ಪಡೆಯಿತು)

(1979ರ 29, 1985ರ 40 ಮತ್ತು 1998ರ 9ರ ಕರ್ನಾಟಕ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ)

[1][ಕರ್ನಾಟಕ ರಾಜ್ಯ][1] ದಲ್ಲಿ ಗಿರಿವಿದಾರರ ವ್ಯವಹಾರವನ್ನು ವಿನಿಯಮಿಸುವ ಮತ್ತು ನಿಯಂತ್ರಿಸುವ ಅಧಿನಿಯಮ.

[1][ಕರ್ನಾಟಕ ರಾಜ್ಯ][1] ದಲ್ಲಿ ಗಿರವಿದಾರರ ವ್ಯವಹಾರವನ್ನು ವಿನಿಯಮಿಸುವುದಕ್ಕಾಗಿ ಮತ್ತು ನಿಯಂತ್ರಿಸುವುದಕ್ಕಾಗಿ ಉಪಬಂಧವನ್ನು ಮಾಡುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಗಿರವಿದಾರರ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1]ಕ್ಕೆ ವ್ಯಾಪ್ತವಾಗುತ್ತದೆ.

(3) ಇದು,-

(ಎ) [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1]ದಲ್ಲಿ ಈ ಕೂಡಲೇ; ಮತ್ತು

(ಬಿ) ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ [2][ದಿನಾಂಕ][2] ದಂದು ರಾಜ್ಯದ ಅಂಥ ಇತರ ಪ್ರದೇಶದಲ್ಲಿ

- ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ಕಂಪನಿ" ಎಂದರೆ ಕಂಪನಿಗಳ ಅಧಿನಿಯಮ, 1956 (ಕೇಂದ್ರ ಅಧಿನಿಯಮ 1956ರ 1) ರಲ್ಲಿ ಪರಿಭಾಷಿಸಿದಂತೆ ಕಂಪನಿ;

(2) "ಸಹಕಾರ ಸಂಘ" ಎಂದರೆ [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959 ([1][ಕರ್ನಾಟಕ][1] ಅಧಿನಿಯಮ 1959ರ 11)ರ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿರುವುದಾಗಿ ಭಾವಿಸಲಾದ ಸಂಘ;

(3) "ಬಡ್ಡಿ" ಎಂಬುದು ಸಾಲಕ್ಕೆ ಸಂಬಂಧಿಸಿದಂತೆ ಅಸಲಿಗಿಂತ ಹೆಚ್ಚಾಗಿ ಪ್ರತಿಫಲವಾಗಿ ಅಥವಾ ಅನ್ಯಥಾ, ಗಿರವಿದಾರನಿಗೆ ಸಂದಾಯ ಮಾಡಿದ ಅಥವಾ ಸಂದಾಯ ಮಾಡಬೇಕಾದ ಯಾವುದೇ ಹೆಸರಿನಿಂದ ಕರೆಯಲಾದ ಯಾವುದೇ ಮೊಬಲಗನ್ನು ಒಳಗೊಳ್ಳುತ್ತದೆ; ಆದರೆ ಇದು ವೆಚ್ಚಗಳಿಗಾಗಿ ಅಥವಾ ವೆಚ್ಚಗಳ ಬಗ್ಗೆ ಗಿರವಿದಾರನು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಕಾನೂನು ಸಮ್ಮತವಾಗಿ ವಿಧಿಸಿದ ಯಾವುದೇ ಮೊತ್ತವನ್ನು ಒಳಗೊಳ್ಳುವುದಿಲ್ಲ;

(4) "ಲೈಸೆನ್ಸ್" ಎಂದರೆ ಈ ಅಧಿನಿಯಮದ ಮೇರೆಗೆ ಮಂಜೂರು ಮಾಡಿದ ಲೈಸೆನ್ಸು;

(5) "ಸಾಲ" ಎಂದರೆ ಬಡ್ಡಿಯ ಮೇಲೆ ಹಣವನ್ನಾಗಲಿ ಅಥವಾ ವಸ್ತು ರೂಪದಲ್ಲಾಗಲಿ ಕೊಟ್ಟ ಮುಂಗಡ ಮತ್ತು ಅಂಥ ಮುಂಗಡವೆಂದು ನ್ಯಾಯಾಲಯಕ್ಕೆ ಸಾರಾಂಶದಲ್ಲಿ ಕಂಡುಬರುವಂಥ ಯಾವುದೇ ವ್ಯವಹಾರವನ್ನು ಒಳಗೊಳ್ಳುತ್ತದೆ, ಆದರೆ ಅದು,-

(i) ಸರ್ಕಾರಿ ಅಂಚೆ ಕಚೇರಿ, ಉಳಿತಾಯ ಬ್ಯಾಂಕಿನಲ್ಲಿ ಅಥವಾ ಸರ್ಕಾರಿ ಉಳಿತಾಯ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿಂಗ್ ಕಂಪನಿಯಲ್ಲಿ ಅಥವಾ ಸಹಕಾರಿ ಸಂಘದಲ್ಲಿ ಇಡಲಾದ ಹಣವನ್ನು ಅಥವಾ ಇತರ ಸ್ವತ್ತಿನ ಠೇವಣಿಯನ್ನು;

1. 1973ರ ಕರ್ನಾಟಕ ಕಾನೂನು ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಈ ಅಧಿನಿಯಮವು, ಅಧಿಸೂಚನೆಯ ಮೂಲಕ 1-10-1966ರಿಂದ ಪರಿಣಮಿಸುವಂತೆ ಜಾರಿಗೆ ಬಂದಿದೆ. ಅಧಿಸೂಚನೆಯ ಅಧಿಕೃತ ಪಾಠವು 13ನೇ ಪುಟದಲ್ಲಿದೆ.

[1][(ii) (ಎ) ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ, 1949 (ಕೇಂದ್ರ ಅಧಿನಿಯಮ 1949ರ ಸಂಖ್ಯೆ 10) ಇದರಲ್ಲಿ ಪರಿಭಾಷಿಸಿದ ಬ್ಯಾಂಕಿಂಗ್ ಕಂಪನಿಯು; ಅಥವಾ

(ಬಿ) ಭಾರತದ ಸ್ಟೇಟ್ ಬ್ಯಾಂಕ್ ಅಧಿನಿಯಮ, 1955 (ಕೇಂದ್ರ ಅಧಿನಿಯಮ 1955ರ 23) ಇದರ ಮೇರೆಗೆ ರಚಿಸಲಾದ ಭಾರತದ ಸ್ಟೇಟ್ ಬ್ಯಾಂಕು; ಅಥವಾ

(ಸಿ) ಭಾರತದ ಸ್ಟೇಟ್ ಬ್ಯಾಂಕ್ (ಸಹಾಯಕ ಬ್ಯಾಂಕುಗಳು) ಅಧಿನಿಯಮ, 1959 (ಕೇಂದ್ರ ಅಧಿನಿಯಮ 1959ರ 38) ಇದರಲ್ಲಿ ಪರಿಭಾಷಿಸಿದಂತೆ ಸಹಾಯಕ ಬ್ಯಾಂಕು; ಅಥವಾ

(ಡಿ) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970 (ಕೇಂದ್ರ ಅಧಿನಿಯಮ 1970ರ 5) ಇದರ ಮೇರೆಗೆ ರಚಿಸಲಾದ ಸಂವಾದಿ ಹೊಸ ಬ್ಯಾಂಕು; ಅಥವಾ

(ಇ) ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1980 (ಕೇಂದ್ರ ಅಧಿನಿಯಮ 1980ರ 40) ಇದರ ಮೇರೆಗೆ ರಚಿಸಲಾದ ಸಂವಾದಿ ಹೊಸ ಬ್ಯಾಂಕು; ಅಥವಾ

(ಎಫ್) ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧಿನಿಯಮ, 1976 (ಕೇಂದ್ರ ಅಧಿನಿಯಮ 1976ರ 21) ಇದರ ಮೇರೆಗೆ ರಚಿಸಲಾದ ಪ್ರಾದೇಶಿಕ ಗ್ರಾಮೀಣ ಬ್ಯಾಂಕು; ಅಥವಾ

(ಜಿ) ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗಾಗಿನ ರಾಷ್ಟ್ರೀಯ ಬ್ಯಾಂಕು ಅಧಿನಿಯಮ, 1981 (ಕೇಂದ್ರ ಅಧಿನಿಯಮ 1981ರ 61) ಇದರ ಮೇರೆಗೆ ಸ್ಥಾಪಿಸಲಾದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗಾಗಿನ ರಾಷ್ಟ್ರೀಯ ಬ್ಯಾಂಕು; ಅಥವಾ

(ಎಚ್) ಭಾರತ ಕಂಪನಿಗಳ ಅಧಿನಿಯಮ, 1956 (ಕೇಂದ್ರ ಅಧಿನಿಯಮ 1956ರ 1) ಇದರ ಮೇರೆಗೆ ನಿಗಮನಗೊಂಡ ಕೃಷಿ ಹಣಕಾಸು ನಿಗಮ ಪರಿಮಿತ ಕಂಪನಿಯು; ಅಥವಾ

(ಐ) ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮ, 1959 (ಕರ್ನಾಟಕ ಅಧಿನಿಯಮ 1959ರ 11) ಇದರ ಮೇರೆಗೆ ನೋಂದಾಯಿತವಾದ ಸಹಕಾರಿ ಸಂಘವು

- ಕೊಟ್ಟ ಮುಂಗಡವನ್ನು;][1]

(iii) ಸರ್ಕಾರವು ಅಥವಾ ಅದರ ಪರವಾಗಿ ಮುಂಗಡಗಳನ್ನು ಕೊಡಲು ಸರ್ಕಾರವು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರವು ಕೊಟ್ಟ ಮುಂಗಡವನ್ನು;

(iv) ವ್ಯವಹಾರದ ಮುಖ್ಯ ಉದ್ದೇಶವಾಗಿ ಹಣ ಸಾಲವನ್ನು ಕೊಡದೆ ಇರುವ ಅಂಥ ವ್ಯವಹಾರದ ನಿಯತ ಕ್ರಮದಲ್ಲಿ ಅಂಥ ಸಾಲವನ್ನು ಕೊಡಲಾಗಿದ್ದರೆ, ಅದನ್ನು ಪ್ರಾಮಾಣಿಕವಾಗಿ ನಡೆಸುತ್ತಿರುವ ಯಾರೇ ವ್ಯಕ್ತಿಯು ಕೊಟ್ಟ ಮುಂಗಡವನ್ನು;

(v) ಕೃಷಿಯನ್ನು ನಡೆಸುವ ಉದ್ದೇಶಕ್ಕಾಗಿ ಭೂಮಾಲೀಕನು ಅವನ ಗೇಣಿದಾರನಿಗೆ ಕೊಟ್ಟ ಮುಂಗಡವನ್ನು

- ಒಳಗೊಳ್ಳುವುದಿಲ್ಲ;

(6) "ಅಧಿಸೂಚನೆ" ಎಂದರೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(7) "ಗಿರಿವಿದಾರ" ಎಂದರೆ ಸಾಲಕ್ಕಾಗಿ ಗಿರವಿಯ ರೂಪದಲ್ಲಿ ಸರಕುಗಳನ್ನು ಮತ್ತು ಚರಸ್ವತ್ತುಗಳನ್ನು ತೆಗೆದುಕೊಳ್ಳುವ ವ್ಯವಹಾರವನ್ನು ನಡೆಸುವ ವ್ಯಕ್ತಿ;

**ವಿವರಣೆ:-** ಸರಕುಗಳನ್ನು ಅಥವಾ ಚರವಸ್ತುಗಳನ್ನು ಖರೀದಿಸುವುದಕ್ಕಾಗಿ ಅಥವಾ ಮಾರಾಟ ಮಾಡುವುದಕ್ಕಾಗಿ ಅಂಗಡಿಯನ್ನು ಇಟ್ಟಿರುವ ಮತ್ತು ಸರಕುಗಳನ್ನು ಮತ್ತು ಚರಸ್ವತ್ತುಗಳನ್ನು ಖರೀದಿಸುವ ಮತ್ತು ಆ ಸರಕುಗಳನ್ನು ಅಥವಾ ಚರಸ್ವತ್ತುಗಳನ್ನು ಯಾವುದೇ ನಿಬಂಧನೆಗಳ ಮೇಲೆ ಆ ತರುವಾಯ ಮರು ಖರೀದಿಸುವುದನ್ನು ವ್ಯಕ್ತಪಡಿಸಿದ ಅಥವಾ ಇಂಗಿತವಾದ ಒಪ್ಪಂದದೊಂದಿಗೆ ಅಥವಾ ಗೊತ್ತುಪಾಡಿನೊಂದಿಗೆ ಅಥವಾ ಅದರ ಮೇರೆಗೆ ಸಂದಾಯ ಮಾಡುವ ಅಥವಾ ಮುಂಗಡವಾಗಿ ಕೊಡುವ ಪ್ರತಿಯೊಬ್ಬ ವ್ಯಕ್ತಿಯು ಈ ಖಂಡದ ಅರ್ಥವ್ಯಾಪ್ತಿಯೊಳಗೆ ಗಿರವಿದಾರನಾಗಿರುತ್ತಾನೆ;

(8) "ಗಿರವಿ ಇಡುವವನು" ಎಂದರೆ ಗಿರವಿದಾರನ ಬಳಿ ಗಿರವಿ ಇಡುವುದಕ್ಕಾಗಿ ವಸ್ತುವನ್ನು ಒಪ್ಪಿಸುವ ವ್ಯಕ್ತಿ;

(9) "ಒತ್ತೆ" ಎಂದರೆ ಗಿರವಿದಾರನಲ್ಲಿ ಗಿರವಿ ಇಡಲಾದ ವಸ್ತು;

1. 1985ರ ಅಧಿನಿಯಮ ಸಂಖ್ಯೆ 40ರ ಮೂಲಕ 31-5-1985ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(10) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(11) ಸಾಲಕ್ಕೆ ಸಂಬಂಧಪಟ್ಟಂತೆ "ಅಸಲು" ಎಂದರೆ ಗಿರವಿ ಇಟ್ಟವನಿಗೆ ವಾಸ್ತವಿಕವಾಗಿ ನೀಡಿದ ಸಾಲದ ಮೊಬಲಗು;

[1][(12) "ವರ್ಷ" ಎಂದರೆ ಏಪ್ರಿಲ್ ಮೊದಲನೇ ದಿನದಂದು ಪ್ರಾರಂಭವಾಗುವ ವರ್ಷ][1].

**3. ಗಿರವಿದಾರನು ಲೈಸೆನ್ಸನ್ನು ಪಡೆಯತಕ್ಕದ್ದು:-** ಯಾರೇ ವ್ಯಕ್ತಿಯು, ಯಾವುದೇ ಪ್ರದೇಶದಲ್ಲಿ ಈ ಅಧಿನಿಯಮದ ಉಪಬಂಧಗಳು ಜಾರಿಗೆ ಬರುವಂಥ ದಿನಾಂಕದಿಂದ ಆರು ತಿಂಗಳುಗಳು ಮುಕ್ತಾಯವಾದ ತರುವಾಯ, ಈ ಅಧಿನಿಯಮದ ಮೇರೆಗೆ ಗಿರವಿದಾರನ ಲೈಸೆನ್ಸನ್ನು ಪಡೆದುಕೊಂಡಿದ್ದ ಹೊರತು ಅಂಥ ಪ್ರದೇಶದಲ್ಲಿ ಯಾವುದೇ ಸ್ಥಳದಲ್ಲಿ ಗಿರವಿದಾರನೆಂದು ವ್ಯವಹಾರವನ್ನು [2][ಮತ್ತು ಕರ್ನಾಟಕ ಗಿರವಿದಾರರ (ತಿದ್ದುಪಡಿ) ಅಧಿನಿಯಮ, 1985ರ ಪ್ರಾರಂಭದ ತರುವಾಯ 4ಎ ಪ್ರಕರಣದಲ್ಲಿ ಉಪಬಂಧಿಸಿದಂತೆ ಭದ್ರತಾ ಠೇವಣಿಯನ್ನು ಸಂದಾಯ ಮಾಡಿದ ಮೇಲೆ ಹೊರತು][2] ನಡೆಸತಕ್ಕದ್ದಲ್ಲ ಅಥವಾ ನಡೆಸುವುದನ್ನು ಮುಂದುವರಿಸತಕ್ಕದ್ದಲ್ಲ.

**ವಿವರಣೆ1:-** ಅದೇ ಪಟ್ಟಣದಲ್ಲಿಯೇ ಆಗಲಿ ಅಥವಾ ಗ್ರಾಮದಲ್ಲಿಯೇ ಆಗಲಿ ಅಥವಾ ಬೇರೆ ಬೇರೆ ಪಟ್ಟಣಗಳಲ್ಲಿ ಮತ್ತು ಗ್ರಾಮಗಳಲ್ಲಿಯೇ ಆಗಲಿ ಒಂದಕ್ಕಿಂತ ಹೆಚ್ಚು ಅಂಗಡಿಯನ್ನು ಅಥವಾ ವ್ಯವಹಾರದ ಸ್ಥಳವನ್ನು ಗಿರವಿದಾರನು ಹೊಂದಿದ್ದರೆ ಅವನು ಅಂಥ ಪ್ರತಿಯೊಂದು ಅಂಗಡಿಗೆ ಅಥವಾ ವ್ಯವಹಾರದ ಸ್ಥಳಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಗಿರವಿದಾರನ ಲೈಸೆನ್ಸನ್ನು ಪಡೆಯತಕ್ಕದ್ದು.

**ವಿವರಣೆ2:-** ಈ ಅಧಿನಿಯಮದ ಮೇರೆಗೆ ಮಂಜೂರು ಮಾಡಿದ ಪ್ರತಿಯೊಂದು ಗಿರವಿದಾರನ ಲೈಸೆನ್ಸು, [1][ಐದು ವರ್ಷಗಳ ಅವಧಿಯವರೆಗೆ ಸಿಂಧುವಾಗಿರತಕ್ಕದ್ದು ಆದರೆ, ಅದನ್ನು ಅವಧಿಯಿಂದ ಅವಧಿಗೆ ನವೀಕರಿಸಬಹುದು.][1]

[3][**ವಿವರಣೆ3:-** ವರ್ಷದ ಮಧ್ಯದಲ್ಲಿ ಲೈಸೆನ್ಸನ್ನು ಮಂಜೂರು ಮಾಡಿದ್ದರೆ ಲೈಸೆನ್ಸಿನ ಅವಧಿಯನ್ನು ಲೆಕ್ಕಹಾಕುವ ಉದ್ದೇಶಕ್ಕಾಗಿ ವರ್ಷದ ಉಳಿದ ಭಾಗವನ್ನು ಒಂದು ವರ್ಷವೆಂದು ಭಾವಿಸತಕ್ಕದ್ದು.][3]

**4. ಲೈಸೆನ್ಸುಗಳ ಮಂಜೂರಾತಿ ಮತ್ತು ನವೀಕರಣ:-** (1) ಗಿರವಿದಾರನ ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ನವೀಕರಣಕ್ಕಾಗಿ ಪ್ರತಿಯೊಂದು ಅರ್ಜಿಯು ಬರಹದಲ್ಲಿರತಕ್ಕದ್ದು ಮತ್ತು ಅದನ್ನು ನಿಯಮಿಸಲಾದ ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಸಲ್ಲಿಸತಕ್ಕದ್ದು.

(2) ಈ ಕೆಳಕಂಡ ಕಾರಣಗಳಲ್ಲಿ ಯಾವುದೇ ಕಾರಣದ ಮೇಲೆ ಅಲ್ಲದೆ ಲೈಸೆನ್ಸಿನ ಮಂಜೂರಾತಿಯನ್ನು ಅಥವಾ ನವೀಕರಣವನ್ನು ನಿರಾಕರಿಸತಕ್ಕುದಲ್ಲ, ಎಂದರೆ:-

(ಎ) ಅರ್ಜಿದಾರನು ಕೆಟ್ಟನಡತೆ ಉಳ್ಳವನು;

**ವಿವರಣೆ:-** ಅರ್ಜಿದಾರನ ಕೆಟ್ಟನಡತೆ ಬಗ್ಗೆ ಯಾವುದೇ ಸಾಕ್ಷ್ಯವನ್ನು ಮುಂದಿಟ್ಟರೆ, ಅಂಥ ಸಾಕ್ಷ್ಯವನ್ನು ಖಂಡಿಸಲು ಅವನಿಗೆ ಅವಕಾಶವನ್ನು ಕೊಡತಕ್ಕದ್ದು;

(ಬಿ) ಗಿರವಿದಾರನ ವ್ಯವಹಾರವನ್ನು ನಡೆಸಲು ಉದ್ದೇಶಿಸುವಂಥ ಅಂಗಡಿಯು ಅಥವಾ ಸ್ಥಳವು ಅಥವಾ ಅವನ ಒಡೆತನದಲ್ಲಿರುವ ಅಥವಾ ಅವನ ಅಧಿಭೋಗದಲ್ಲಿರುವ ಯಾವುದೇ ಪಕ್ಕದ ಮನೆಗೆ ಅಥವಾ ಅಂಗಡಿಗೆ ಅಥವಾ ಸ್ಥಳಕ್ಕೆ ಕೆಟ್ಟನಡತೆಯ ವ್ಯಕ್ತಿಗಳು ಮೇಲಿಂದ ಮೇಲೆ ಬರುತ್ತಿರುವುದು; ಅಥವಾ

(ಸಿ) ಅರ್ಜಿದಾರನು [4][ಕರ್ನಾಟಕ][4] ಲೇವಾದೇವಿದಾರರ ಅಧಿನಿಯಮ, 1961ರ ಮೇರೆಗೆ ಲೈಸೆನ್ಸನ್ನು ಹೊಂದಿಲ್ಲದೆ ಇರುವುದು.

(3) ಲೈಸೆನ್ಸಿನ ಮಂಜೂರಾತಿ ಅಥವಾ ನವೀಕರಣವನ್ನು ನಿರಾಕರಿಸುವ ಆದೇಶದ ಮೂಲಕ ಬಾಧಿತನಾದ ಯಾರೇ ವ್ಯಕ್ತಿಯು, ನಿಯಮಿಸಿದ ಕಾಲದೊಳಗೆ ನಿಯಮಿಸಿದ ಪ್ರಾಧಿಕಾರಿಗೆ ಅಪೀಲನ್ನು ಮಾಡಿಕೊಳ್ಳಬಹುದು.

(4) ಪ್ರತಿಯೊಂದು ಲೈಸೆನ್ಸನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು [5][4-ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೆ ಮತ್ತು ಅಂಥ ಇತರ ಷರತ್ತುಗಳಿಗೊಳಪಟ್ಟು][5] ಮಂಜೂರು ಮಾಡತಕ್ಕದ್ದು ಅಥವಾ ನವೀಕರಿಸತಕ್ಕದ್ದು.

[6][(5) ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ನವೀಕರಣಕ್ಕಾಗಿ ಪ್ರತಿಯೊಂದು ಅರ್ಜಿಯೊಂದಿಗೆ ಈ ಕೆಳಕಂಡ ದರಗಳಲ್ಲಿ ಫೀಜು ಇರತಕ್ಕದ್ದು.

| | | |
|---|---|---|
| (ಎ) | ವ್ಯವಹಾರವನ್ನು ನಡೆಸಬೇಕಾದಂಥ ಸ್ಥಳವು ಒಂದಕ್ಕಿಂತ ಹೆಚ್ಚಾಗಿಲ್ಲದಿದ್ದರೆ. | ಎರಡು ಸಾವಿರದ ಐದನೂರು ರೂಪಾಯಿಗಳು |
| (ಬಿ) | ವ್ಯವಹಾರವನ್ನು ಒಂದಕ್ಕಿಂತ ಹೆಚ್ಚು ಸ್ಥಳದಲ್ಲಿ ನಡೆಸಬೇಕಾಗಿದ್ದರೆ. | ಮೂಲ ವ್ಯವಹಾರದ ಸ್ಥಳಕ್ಕೆ ಎರಡು ಸಾವಿರದ ಐದುನೂರು ರೂಪಾಯಿಗಳು ಮತ್ತು ಇತರ ಪ್ರತಿಯೊಂದು ಸ್ಥಳಕ್ಕೆ ಒಂದು ಸಾವಿರದ ಎರಡು ನೂರು ಐವತ್ತು ರೂಪಾಯಿಗಳು:][6] |

1. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 21-4-1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1985ರ ಅಧಿನಿಯಮ ಸಂಖ್ಯೆ 40ರ ಮೂಲಕ 31-5-1985 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 21-4-98 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1973ರ ಕರ್ನಾಟಕ ಕಾನೂನು ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
5. 1985ರ ಅಧಿನಿಯಮದ ಸಂಖ್ಯೆ 40ರ ಮೂಲಕ 31-5-1985ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 21-4-1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಅಂಥ ಅರ್ಜಿಗೆ ಸಂಬಂಧಿಸಿದಂತೆ ನಿಯಮಗಳ ಮೂಲಕ ನಿಯಮಿಸಿದ ಅವಧಿಯು ಮುಕ್ತಾಯವಾದ ತರುವಾಯ ಅರ್ಜಿಯನ್ನು ಸಲ್ಲಿಸಿದ್ದರೆ ಅದರೊಂದಿಗೆ ಮೇಲೆ ನಿರ್ದಿಷ್ಟಪಡಿಸಲಾದ ದರಗಳ ಎರಡರಷ್ಟು ಫೀಜು ಇರತಕ್ಕದ್ದು.

(6) ಲೈಸೆನ್ಸಿನ ಮಂಜೂರಾತಿಯನ್ನು ಅಥವಾ ನವೀಕರಣವನ್ನು ನಿರಾಕರಿಸಿದ್ದರೂ ಅಥವಾ ಅರ್ಜಿಯನ್ನು ಹಿಂತೆಗೆದು ಕೊಂಡಿದ್ದರೂ, ಈ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಫೀಜನ್ನು ನಿಯಮಿಸಿದ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ಮರು ಪಾವತಿ ಮಾಡತಕ್ಕದ್ದಲ್ಲ.

[1][4ಎ. ಲೈಸೆನ್ಸಿನ ಷರತ್ತುಗಳು:- [2][(1) 4ನೇ ಪ್ರಕರಣದ ಮೇರೆಗೆ ಲೈಸೆನ್ಸನ್ನು ಮಂಜೂರು ಮಾಡುವಂತೆ ಕೋರಿ ಅರ್ಜಿಸಲ್ಲಿಸುವ ಪ್ರತಿಯೊಬ್ಬ ವ್ಯಕ್ತಿಯು, ಅಂಥ ಅರ್ಜಿಯನ್ನು ಸಲ್ಲಿಸುವ ಸಮಯದಲ್ಲಿ (2)ನೇ ಉಪ-ಪ್ರಕರಣದ ಮೇರೆಗೆ ಉಪಬಂಧಿಸಲಾದಂತೆ ಭದ್ರತಾ ಠೇವಣಿಯನ್ನು ಸಂದಾಯ ಮಾಡತಕ್ಕದ್ದು ಮತ್ತು ಅಂಥ ಲೈಸೆನ್ಸನ್ನು ನವೀಕರಿಸುವಂತೆ ಕೋರಿ ಅರ್ಜಿ ಸಲ್ಲಿಸಿದ ಸಂದರ್ಭದಲ್ಲಿ, ಅಂಥ ಲೈಸೆನ್ಸಿನ ಅವಧಿ ಮುಗಿಯುವ ಎರಡು ತಿಂಗಳ ಮುಂಚೆ ಭದ್ರತಾ ಠೇವಣಿಯನ್ನು ಸಂದಾಯ ಮಾಡತಕ್ಕದ್ದು.][2]

(2) ಕೆಳಗಿನ ಕೋಷ್ಟಕದ (1)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಪ್ರತಿಯೊಬ್ಬ ಲೈಸೆನ್ಸುದಾರನು ನಿಯಮಿಸಿದ ರೀತಿಯಲ್ಲಿ ಆ ಲೈಸೆನ್ಸಿನ ಷರತ್ತುಗಳ ಯುಕ್ತ ಪಾಲನೆಗಾಗಿ ಠೇವಣಿಯ ರೂಪದಲ್ಲಿ ಸದರಿ ಕೋಷ್ಟಕದ (2)ನೇ ಅಂಕಣದಲ್ಲಿನ ಸಂವಾದಿ ನಮೂದಿನಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸರ್ಕಾರಿ ಖಜಾನೆಯಲ್ಲಿ ಠೇವಣಿ ಇಡತಕ್ಕದ್ದು.

**ಕೋಷ್ಟಕ**

| | (1) | (2) |
|---|---|---|
| 1. | ಒಂದು ವರ್ಷದಲ್ಲಿ ಒಂದು ಲಕ್ಷ ರೂಪಾಯಿ ಗಳಿಗಿಂತ ಕಡಿಮೆ [2][ಹಣಹೂಡುವ][2] ಲೈಸೆನ್ಸುದಾರ. | ಐದುಸಾವಿರ ರೂಪಾಯಿಗಳು. |
| 2. | ಒಂದು ವರ್ಷದಲ್ಲಿ ಒಂದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಹೆಚ್ಚು ಆದರೆ ಐದು ಲಕ್ಷ ರೂಪಾಯಿಗಳಿಗಿಂತ ಕಡಿಮೆ [2][ಹಣಹೂಡುವ][2] ಲೈಸೆನ್ಸುದಾರ. | ಹತ್ತು ಸಾವಿರ ರೂಪಾಯಿಗಳು. |
| 3. | ಒಂದು ವರ್ಷದಲ್ಲಿ ಐದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಹೆಚ್ಚು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ [2][ಹಣಹೂಡುವ][2] ಲೈಸೆನ್ಸುದಾರ. | ಇಪ್ಪತ್ತೈದು ಸಾವಿರ ರೂಪಾಯಿಗಳು. |
| 4. | ಒಂದು ವರ್ಷದಲ್ಲಿ ಹತ್ತು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಹೆಚ್ಚು [2][ಹಣಹೂಡುವ][2] ಲೈಸೆನ್ಸುದಾರ. | ಐವತ್ತು ಸಾವಿರ ರೂಪಾಯಿಗಳು. |

(3) (2)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಒಂದು ವರ್ಷದಲ್ಲಿ ಒಬ್ಬ ಲೈಸೆನ್ಸುದಾರನು ಸಂದಾಯ ಮಾಡಬೇಕಾದ ಭದ್ರತೆಯ ಮೊಬಲಗನ್ನು [2][ಹಿಂದಿನ ವರ್ಷದಲ್ಲಿ ಅವನು ಸಾಲವಾಗಿ ವ್ಯವಹಾರದಲ್ಲಿ ಹೂಡಿದ ಮೊಬಲಗಿನ][2] ಆಧಾರದ ಮೇಲೆ ನಿರ್ಧರಿಸತಕ್ಕದ್ದು [3][ಮತ್ತು ಅಂಥ ಭದ್ರತಾ ಠೇವಣಿಗೆ ಯಾವುದೇ ಬಡ್ಡಿಯನ್ನು ನೀಡತಕ್ಕದ್ದಲ್ಲ:][3]

ಪರಂತು, ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 (ಕರ್ನಾಟಕ ಅಧಿನಿಯಮ 1962ರ 12)ರ ಉಪಬಂಧಗಳ ಮೇರೆಗೆ ಲೈಸೆನ್ಸುದಾರನು ಇಟ್ಟ ಭದ್ರತಾ ಠೇವಣಿಯನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿಯೂ ಸಹ ಭದ್ರತಾ ಠೇವಣಿ ಎಂಬುದಾಗಿ ಭಾವಿಸತಕ್ಕದ್ದು:

[4][ಮತ್ತೂ ಪರಂತು, ಹೊಸ ಲೈಸೆನ್ಸುದಾರನ ಅಥವಾ ಹಿಂದಿನ ವರ್ಷದ ಒಂದು ಭಾಗಕ್ಕೆ ಮಾತ್ರ ಲೈಸೆನ್ಸ್ ಪಡೆದಿರುವ ಒಬ್ಬ ವ್ಯಕ್ತಿಯ ಸಂದರ್ಭದಲ್ಲಿ, ಭದ್ರತಾ ಠೇವಣಿಯ ಮೊತ್ತವನ್ನು ಆ ವರ್ಷದಲ್ಲಿ ಅವನು ಹೂಡುವ ಸಂಭವವಿರುವಂಥ ಮೊತ್ತಕ್ಕೆ ಸಂಬಂಧಪಟ್ಟಂತೆ ನಿಯಮಿಸಲಾದ ನಮೂನೆಯಲ್ಲಿ ಸಲ್ಲಿಸಿದ ಘೋಷಣೆಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು][4]

1. 1985ರ ಅಧಿನಿಯಮ ಸಂಖ್ಯೆ 40ರ ಮೂಲಕ 31-5-1985ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 21-4-1998ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 31-5-1985ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 9ರ ಮೂಲಕ 21-4-1998ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**4ಬಿ. ಭದ್ರತೆಯ ಮುಟ್ಟುಗೋಲು:-** (1) ಲೈಸೆನ್ಸು ಕೊಡುವ ಪ್ರಾಧಿಕಾರವು ಯಾವುದೇ ಕಾಲದಲ್ಲಿ ಬರಹದಲ್ಲಿನ ಆದೇಶದ ಮೂಲಕ 4ಬಿ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಿದ ಅಥವಾ ಸಂದಾಯ ಮಾಡಲಾಗಿದೆಯೆಂದು ಭಾವಿಸಲಾದ ಭದ್ರತಾ ಠೇವಣಿಯ ಪೂರ್ಣ ಅಥವಾ ಯಾವುದೇ ಭಾಗವನ್ನು,-

(ಎ) ಲೈಸೆನ್ಸುದಾರನು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ನಿಯಮಗಳ ಯಾವುದೇ ಉಪಬಂಧವನ್ನು ಅಥವಾ ಲೈಸೆನ್ಸಿನ ಷರತ್ತುಗಳನ್ನು ಉಲ್ಲಂಘಿಸಿ ಹಣವನ್ನು ಸಾಲ ನೀಡುವ ವ್ಯವಹಾರವನ್ನು ನಡೆಸಿದರೆ; ಅಥವಾ

(ಬಿ) 9ನೇ ಪ್ರಕರಣದ (3)ನೇ ಉಪಪ್ರಕರಣದ, 15ನೇ ಪ್ರಕರಣದ, 16ನೇ ಪ್ರಕರಣದ ಅಥವಾ 16-ಎ ಪ್ರಕರಣದ ಅಥವಾ 18ನೇ ಪ್ರಕರಣದ ಮೇರೆಗೆ ಅಪರಾಧದ ಬಗ್ಗೆ ಅಪರಾಧಿ ಎಂದು ನಿರ್ಣೀತನಾದರೆ; ಅಥವಾ

(ಸಿ) ಸುಳ್ಳು ಲೆಕ್ಕಪತ್ರಗಳನ್ನು ಇಟ್ಟಿದ್ದರೆ

-ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಭದ್ರತಾ ಠೇವಣಿಯ ಪೂರ್ಣ ಅಥವಾ ಯಾವುದೇ ಭಾಗವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಮುಂಚೆ, ಲೈಸೆನ್ಸು ಕೊಡುವ ಪ್ರಾಧಿಕಾರವು ಲೈಸೆನ್ಸುದಾರನಿಗೆ ಬರಹದಲ್ಲಿ, ಯಾವ ಕಾರಣಗಳಿಗಾಗಿ ಕ್ರಮವನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆಯೋ ಆ ಕಾರಣಗಳನ್ನು ನಿರೂಪಿಸಿ ಮತ್ತು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಅದರ ವಿರುದ್ಧ ಕಾರಣವನ್ನು ತೋರಿಸಲು ಅವನನ್ನು ಅಗತ್ಯಪಡಿಸಿ ನೋಟೀಸನ್ನು ಕೊಡತಕ್ಕದ್ದು.

(3) ಈ ಪ್ರಕರಣದ ಮೇರೆಗಿನ ಲೈಸೆನ್ಸು ಕೊಡುವ ಪ್ರಾಧಿಕಾರದ ಪ್ರತಿಯೊಂದು ಆದೇಶವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಲೈಸೆನ್ಸುದಾರನಿಗೆ ತಿಳಿಸತಕ್ಕದ್ದು.

(4) (1)ನೇ ಉಪಪ್ರಕರಣದ ಮೇರೆಗಿನ ಆದೇಶದ ಮೂಲಕ ಬಾಧಿತನಾದ ಪ್ರತಿಯೊಬ್ಬ ವ್ಯಕ್ತಿಯೂ, ಅವನಿಗೆ ಆದೇಶವನ್ನು ತಿಳಿಸಿದಂಥ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ನಿಯಮಿಸಿದ ಪ್ರಾಧಿಕಾರಿಗೆ ಅಪೀಲನ್ನು ಸಲ್ಲಿಸಬಹುದು. ಅವನ ತೀರ್ಮಾನವು ಅಂತಿಮವಾಗಿರತಕ್ಕದ್ದು.

(5) ಲೈಸೆನ್ಸು ಕೊಡುವ ಪ್ರಾಧಿಕಾರವು ಮುಟ್ಟುಗೋಲು ಹಾಕಿಕೊಂಡ ಮೊಬಲಗಿನಿಂದ ನಿಯಮಿಸಬಹುದಾದಂಥ ಮೊಬಲಗು ಮತ್ತು ಅಂಥ ದರಗಳಲ್ಲಿ ಲೈಸೆನ್ಸುದಾರನ ಕಾರ್ಯಗಳ ಮೂಲಕ ಬಾಧಿತರಾದ ಸಾಲ ತೆಗೆದುಕೊಂಡಿರುವವರಿಗೆ ಸಂದಾಯ ಮಾಡಲು ನಿರ್ದೇಶಿಸಬಹುದು.][1]

**5. ಗಿರವಿದಾರರು ಅಂಗಡಿಗಳ ಮೇಲೆ ಅವರ ಹೆಸರುಗಳನ್ನು ಪ್ರದರ್ಶಿಸುವುದು, ಇತ್ಯಾದಿ:-**

ಪ್ರತಿಯೊಬ್ಬ ಗಿರವಿದಾರನು,-

(ಎ) ಅವನ ಅಂಗಡಿಯ ಅಥವಾ ವ್ಯವಹಾರ ಸ್ಥಳದ ಹೊರಬಾಗಿಲಿನ ಮೇಲೆ ದೊಡ್ಡ ಅಕ್ಷರಗಳಲ್ಲಿ ಗಿರವಿದಾರ ಎಂಬ ಪದದೊಂದಿಗೆ ಅವನ ಹೆಸರನ್ನು ಇಂಗ್ಲೀಷಿನಲ್ಲಿ ಮತ್ತು ಕನ್ನಡದಲ್ಲಿ ಅದಕ್ಕೆ ಸಮನಾದುದನ್ನು ಯಾವಾಗಲೂ ಪ್ರದರ್ಶಿಸಿ ಇಡತಕ್ಕದ್ದು; ಮತ್ತು

(ಬಿ) ಅವನ ಅಂಗಡಿಯ ಅಥವಾ ವ್ಯವಹಾರದ ಸ್ಥಳದ ಎದ್ದು ಕಾಣುವ ಭಾಗದಲ್ಲಿ ಅಲ್ಲಿಗೆ ಹೋಗಿ ಬರುವ ಎಲ್ಲಾ ವ್ಯಕ್ತಿಗಳಿಗೆ ಸ್ಪಷ್ಟವಾಗಿ ಕಾಣುವ ಹಾಗೆ ಕನ್ನಡ ಭಾಷೆಯಲ್ಲಿ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ಗಿರವಿ ಚೀಟಿಗಳ ಮೇಲೆ ಮುದ್ರಿಸಬೇಕೆಂದು ಅಗತ್ಯಪಡಿಸಿದ ಮಾಹಿತಿಯನ್ನು, ಯಾವಾಗಲೂ ಇಟ್ಟಿರತಕ್ಕದ್ದು.

**6. ಗಿರವಿದಾರರಿಗೆ ಅನುಮತಿಸಲಾದ ಬಡ್ಡಿ ಮತ್ತು ವೆಚ್ಚಗಳು:-** (1) ಯಾರೇ ಗಿರವಿದಾರನು ಒತ್ತೆಯ ಮೇಲಿನ ಸಾಲಕ್ಕೆ ಸಂಬಂಧಿಸಿದಂತೆ ವರ್ಷಕ್ಕೆ ಶೇಕಡಾ ಒಂಬತ್ತನ್ನು ಅಥವಾ ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಕಾಲಕಾಲಕ್ಕೆ ನಿಗದಿಪಡಿಸಬಹುದಾದಂಥ ಇತರ ದರವನ್ನು ಮೀರುವ ದರದಲ್ಲಿ ಸರಳ ಬಡ್ಡಿಯನ್ನು ವಿಧಿಸತಕ್ಕದ್ದಲ್ಲ.

(2) ಗಿರವಿದಾರನು ಗಿರವಿ ಇಟ್ಟವನಿಂದ, ನಿಯಮಿಸಬಹುದಾದಂಥ ವೆಚ್ಚಗಳನ್ನು ಮತ್ತು ಅಂಥ ಪ್ರಕರಣಗಳಲ್ಲಿ ತಗಾದೆ ಮಾಡಬಹುದು ಮತ್ತು ತೆಗೆದುಕೊಳ್ಳಬಹುದು.

(3) ಗಿರವಿದಾರನು, ಗಿರವಿ ಇಟ್ಟವನಿಂದ ತನಗೆ ಬಾಕಿಬರಬೇಕಾದ ಬಡ್ಡಿ ಮತ್ತು (2) ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವೆಚ್ಚವು ಯಾವುದಾದರೂ ಇದ್ದರೆ ಅದನ್ನು ಹೊರತುಪಡಿಸಿ, ಯಾವುದೇ ಲಾಭವನ್ನು, ಬಡ್ಡಿಯನ್ನು, ವೆಚ್ಚವನ್ನು ಅಥವಾ ಇತರ ಯಾವುದಾದರೂ ಆದ ಮೊತ್ತವನ್ನು ತಗಾದೆ ಮಾಡತಕ್ಕುದಲ್ಲ ಅಥವಾ ತೆಗೆದುಕೊಳ್ಳತಕ್ಕದ್ದಲ್ಲ.

**7. ಗಿರವಿ ಇಟ್ಟವನಿಗೆ ಗಿರವಿ ಚೀಟಿಯನ್ನು ಕೊಡತಕ್ಕದ್ದು:-** ಪ್ರತಿಯೊಬ್ಬ ಗಿರವಿದಾರನು ಗಿರವಿಗೆ ಒತ್ತೆಯನ್ನು ಇಟ್ಟುಕೊಂಡ ಮೇಲೆ ಗಿರವಿ ಇಟ್ಟವನಿಗೆ, ನಿಯಮಿಸಿದ ನಮೂನೆಯಲ್ಲಿ ಗಿರವಿದಾರನು ಮತ್ತು ಗಿರವಿ ಇಟ್ಟವ ರುಜುಮಾಡಿದ ಗಿರವಿ ಚೀಟಿಯನ್ನು ಕೊಡತಕ್ಕದ್ದು ಮತ್ತು ಗಿರವಿ ಇಟ್ಟವನು ಗಿರವಿ ಚೀಟಿಯನ್ನು ತೆಗೆದುಕೊಂಡ ಹೊರತು ಗಿರವಿಗೆ ಒತ್ತೆಯನ್ನು ಇಟ್ಟುಕೊಳ್ಳತಕ್ಕದ್ದಲ್ಲ.

**8. ಗಿರವಿ ಚೀಟಿಯನ್ನು ಹಾಜರುಪಡಿಸುವ ವ್ಯಕ್ತಿಯು ಒತ್ತೆಯನ್ನು ವಾಪಸು ಪಡೆಯಲು ಹಕ್ಕುಳ್ಳವನಾಗಿರುವುದಾಗಿ ಪೂರ್ವಭಾವನೆ ಮಾಡತಕ್ಕದ್ದು:-** (1) ಗಿರವಿ ಚೀಟಿಯನ್ನು ತತ್ಕಾಲದಲ್ಲಿ ಧಾರಣ ಮಾಡಿರುವವನನ್ನು ಆ ಒತ್ತೆಯನ್ನು ವಾಪಸ್ಸು ಪಡೆಯಲು ಹಕ್ಕುಳ್ಳವನಾದ ವ್ಯಕ್ತಿಯೆಂಬುದಾಗಿ ಪೂರ್ವ ಭಾವನೆ ಮಾಡತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪ್ರತಿಯೊಬ್ಬ ಗಿರವಿದಾರನು, ಅಸಲು ಮತ್ತು ಬಡ್ಡಿಯನ್ನು ಸಂದಾಯ ಮಾಡಿದ ಮೇಲೆ ಗಿರವಿ ಚೀಟಿಯನ್ನು ಹಾಜರುಪಡಿಸುವ ವ್ಯಕ್ತಿಗೆ ಒತ್ತೆಯನ್ನು ವಾಪಸ್ಸುಕೊಡತಕ್ಕದ್ದು ಮತ್ತು ಹಾಗೆ ಮಾಡುವುದಕ್ಕಾಗಿ ಗಿರವಿದಾರನಿಗೆ ಈ ಮೂಲಕ ರಕ್ಷಣೆ ಕೊಡಲಾಗಿದೆ.

(2) ಈ ಅಧಿನಿಯಮದಲ್ಲಿ ಅನ್ಯಥಾ ವ್ಯಕ್ತವಾಗಿ ಉಪಬಂಧಿಸಿರುವಂತೆ ಹೊರತು, ಗಿರವಿದಾರನು, ಗಿರವಿ ಚೀಟಿಯನ್ನು ಅವನಿಗೆ ಒಪ್ಪಿಸಿದ ಹೊರತು ಒತ್ತೆಯನ್ನು ಹಿಂದಕ್ಕೆ ಕೊಡಲು ಬದ್ಧನಾಗಿರತಕ್ಕದ್ದಲ್ಲ.

**9. ಗಿರವಿ ಚೀಟಿಗಳನ್ನು ಹೊಂದಿಲ್ಲದ ಒಡೆಯರು ಮತ್ತು ಗಿರವಿ ಇಟ್ಟವರ ಸಂರಕ್ಷಣೆ:-** (1) ಈ ಕೆಳಕಂಡ ಉಪಬಂಧಗಳು, ಗಿರವಿ ಇಟ್ಟ ವಸ್ತುಗಳ ಒಡೆಯರ ಮತ್ತು ಹಾಜರುಪಡಿಸಲು ಅವರ ಗಿರವಿ ಚೀಟಿಗಳನ್ನು ಹೊಂದಿಲ್ಲದ ಗಿರವಿ ಇಟ್ಟವರ ರಕ್ಷಣೆಗಾಗಿ ಪರಿಣಾಮವುಳ್ಳದ್ದಾಗಿರತಕ್ಕದ್ದು.

(ಎ) ಒತ್ತೆಯ ಒಡೆಯನಾಗಿರುವುದಾಗಿ ಕ್ಲೇಮು ಮಾಡುವ, ಆದರೆ ಗಿರವಿ ಚೀಟಿಯನ್ನು ಹೊಂದಿರದ ಯಾರೇ ವ್ಯಕ್ತಿಯು ಅಥವಾ ಗಿರವಿ ಚೀಟಿಯನ್ನು ಹೊಂದಲು ಹಕ್ಕುಳ್ಳವನಾಗಿರುವನೆಂದು ಕ್ಲೇಮು ಮಾಡುವ ಆದರೆ ಅದು ಕಳೆದುಹೋಗಿದೆ, ಕೈಮರೆತಿಡಲಾಗಿದೆ, ನಾಶ ಹೊಂದಿದೆ ಅಥವಾ ಕಳುವಾಗಿದೆ ಅಥವಾ ಅವನಿಂದ ಮೋಸದಿಂದ ಪಡೆದುಕೊಳ್ಳಲಾಗಿದೆಯೆಂದು ಹೇಳುವ ಯಾರೇ ವ್ಯಕ್ತಿಯು ಗಿರವಿದಾರನಿಗೆ ಘೋಷಣೆಯ ಮುದ್ರಿತ ನಮೂನೆಗಾಗಿ (ಅದು ನಿಯಮಿಸಲಾದ ನಮೂನೆಯಲ್ಲಿರತಕ್ಕದ್ದು) ಅರ್ಜಿಹಾಕಿ ಕೊಳ್ಳಬಹುದು. ಅದನ್ನು ಗಿರವಿದಾರನು ಅವನಿಗೆ ಕೊಡತಕ್ಕದ್ದು:

ಪರಂತು, ಅರ್ಜಿಯನ್ನು ಈ ಖಂಡದ ಮೇರೆಗೆ ಆ ಸಾಲವು ಇನ್ನೂರ ಐವತ್ತು ರೂಪಾಯಿಗಳನ್ನು ಮೀರಿದ್ದರೆ, ಅರ್ಜಿದಾರನು ನಿಯಮಿಸಬಹುದಾದಂಥ ವಿವರಗಳನ್ನು ಒಳಗೊಂಡ, ನಿಯಮಿಸಬಹುದಾದಂಥ ರೀತಿಯಲ್ಲಿ ಅರ್ಜಿಯ ದಿನಾಂಕಕ್ಕೆ ಮುಂಚೆ ನಿಯಮಿಸಿದ ಸಂಖ್ಯೆಯ ದಿವಸಗಳಿಗೆ ಕಡಿಮೆಯಿಲ್ಲದೆ ಅವನ ಕ್ಲೇಮಿನ ಬಗ್ಗೆ ಸಾರ್ವಜನಿಕ ನೋಟೀಸನ್ನು ಪ್ರಕಟಿಸುವಂತೆ ಮಾಡಿದ್ದ ಹೊರತು ಮಾಡಿಕೊಳ್ಳತಕ್ಕದ್ದಲ್ಲ;

(ಬಿ) ಅರ್ಜಿದಾರನು, ಮತ್ತು ಅವನನ್ನು ಗುರುತಿಸುವ ವ್ಯಕ್ತಿಯು ಯಾರೇ ಮ್ಯಾಜಿಸ್ಟ್ರೇಟ್‌ನ ಅಥವಾ ನ್ಯಾಯಾಧೀಶನ ಮುಂದೆ ಕ್ರಮಬದ್ಧವಾಗಿ ಮಾಡಿದ ಘೋಷಣೆಯನ್ನು ಅರ್ಜಿದಾರನು ಗಿರವಿದಾರನಿಗೆ ಹಿಂದಕ್ಕೆ ಕೊಟ್ಟರೆ, ತನ್ನ ಮತ್ತು ಗಿರವಿದಾರನ ನಡುವೆ, ಅವನು ಗಿರವಿ ಚೀಟಿಯನ್ನು ಹಾಜರುಪಡಿಸಿದ್ದಿದ್ದರೆ ಹೇಗೋ ಹಾಗೆ ಎಲ್ಲಾ ಅವೇ ಹಕ್ಕುಗಳನ್ನು ಮತ್ತು ಪರಿಹಾರೋಪಾಯಗಳನ್ನು ಅರ್ಜಿದಾರನು ಹೊಂದಿರತಕ್ಕುದು:

ಪರಂತು, ಅಂಥ ಘೋಷಣೆಯು ಆ ಉದ್ದೇಶಕ್ಕಾಗಿ,-

(i) ಸಾಲವು ಇನ್ನೂರೈವತ್ತು ರೂಪಾಯಿಗಳನ್ನು ಮೀರುವ ಪ್ರಕರಣಗಳಲ್ಲಿ ಅರ್ಜಿದಾರನು ಗಿರವಿದಾರನಿಗೆ ಅಥವಾ ಈ ಬಗ್ಗೆ ನಿಯಮಿಸಬಹುದಾದಂಥ ಪ್ರಾಧಿಕಾರಿ ಅಥವಾ ವ್ಯಕ್ತಿಗಳಿಗೆ ಸಮಾಧಾನವಾಗುವಂತೆ, ಒತ್ತೆಯನ್ನು ವಾಪಸ್ಸು ಕೊಡುವುದಕ್ಕಾಗಿ ಗಿರವಿದಾರನು ವಹಿಸಬೇಕಾಗಬಹುದಾದಂಥ ಯಾವುದೇ ಹೊಣೆಗಾರಿಕೆಗೆ ಅಥವಾ ಘೋಷಣೆಗೆ ಅನುಸಾರವಾಗಿ ಅನ್ಯಥಾ ನಡೆಯುವುದಕ್ಕೆ ಸಂಬಂಧಿಸಿದಂತೆ ಗಿರವಿದಾರನಿಗೆ ನಷ್ಟಭರ್ತಿ ಮಾಡಿಕೊಡಲು ಒಪ್ಪಿಕೊಂಡು ಇಬ್ಬರು ಜಾಮೀನುದಾರರೊಂದಿಗೆ ಬಾಂಡನ್ನು ಬರೆದುಕೊಟ್ಟ ಹೊರತು; ಮತ್ತು

(ii) ಎಲ್ಲಾ ಪ್ರಕರಣಗಳಲ್ಲಿ ಅರ್ಜಿದಾರನಿಗೆ ನಮೂನೆಯನ್ನು ಒಪ್ಪಿಸಿದ ತರುವಾಯ ನಿಯಮಿಸಬಹುದಾದಂಥ ಅವಧಿಯೊಳಗೆ ಘೋಷಣೆಯನ್ನು ಕ್ರಮಬದ್ಧವಾಗಿ ಮಾಡಿದ್ದರೆ ಮತ್ತು ಅದನ್ನು ಗಿರವಿದಾರನಿಗೆ ಹಿಂದಕ್ಕೆ ಕೊಟ್ಟಿದ್ದ ಹೊರತು

-ಪರಿಣಾಮಕಾರಿಯಾಗಿರತಕ್ಕುದಲ್ಲ;

(ಸಿ) ಹಿಂದೆ ಹೇಳಿದ ಅವಧಿಯು ಮುಕ್ತಾಯವಾಗುವವರೆಗೆ ಯಾರೇ ವ್ಯಕ್ತಿಗೆ ಒತ್ತೆಯನ್ನು ವಾಪಸು ಮಾಡದೇ ಇರುವುದಕ್ಕಾಗಿ ಗಿರವಿದಾರನಿಗೆ ಈ ಮೂಲಕ ರಕ್ಷಣೆ ಕೊಡಲಾಗಿದೆ;

(ಡಿ) ಆ ಘೋಷಣೆಯು ಮೋಸದ್ದೆಂದು ಅಥವಾ ಯಾವುದೇ ಮುಖ್ಯ ವಿವರಗಳಲ್ಲಿ ಸುಳ್ಳಾಗಿತ್ತೆಂದು ಸ್ವತ್ತು ವರ್ಗಾವಣೆ ಅಧಿನಿಯಮ, 1882 (ಕೇಂದ್ರ ಅಧಿನಿಯಮ 1882ರ iv)ರ ಅರ್ಥವ್ಯಾಪ್ತಿಯೊಳಗೆ ಅವನು ನೋಟೀಸನ್ನು ಹೊಂದಿದ್ದ ಹೊರತು, ಆ ಒತ್ತೆಯನ್ನು ವಾಪಸು ಕೊಡುವುದಕ್ಕಾಗಿ ಅಥವಾ ಅನ್ಯಥಾ ಆ ಘೋಷಣೆಗೆ ಅನುಸಾರವಾಗಿ ಕಾರ್ಯ ನಿರ್ವಹಿಸುವುದಕ್ಕಾಗಿ ಗಿರವಿದಾರನಿಗೆ ಈ ಮೂಲಕ ಮತ್ತಷ್ಟು ರಕ್ಷಣೆ ಕೊಡಲಾಗಿದೆ.

(2) (1) ನೇ ಉಪಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ, ಆದರೆ ಒತ್ತೆಯ ಒಡೆಯನಿಗೆ ಅಥವಾ ಗಿರವಿ ಚೀಟಿಯನ್ನು ಹೊಂದಲು ಹಕ್ಕುಳ್ಳವನಾದ ವ್ಯಕ್ತಿಗೆ, ಆ ಒತ್ತೆಗಾಗಿ ಜವಾಬ್ದಾರನಾಗಿರಬೇಕಾದ ತನ್ನ ಹೊಣೆಗಾರಿಕೆಗೆ ಬಾಧಕವಾಗದಂತೆ, ಗಿರವಿದಾರನು, ಒತ್ತೆಯ ಒಡೆಯನಾಗಿರುವುದಾಗಿ ಕ್ಲೇಮು ಮಾಡುವ, ಆದರೆ ಗಿರವಿ ಚೀಟಿಯನ್ನು ಹೊಂದಿಲ್ಲದ ವ್ಯಕ್ತಿಗೆ, ಅಂಥ ವ್ಯಕ್ತಿಯು ಒತ್ತೆಯ ಒಡೆಯನೆಂದು ಮತ್ತು ಆ ಒತ್ತೆಯನ್ನು ವಾಪಸು ಪಡೆಯಲು ಹಕ್ಕುಳ್ಳವನಾಗಿದ್ದಾನೆಂದು ಮನದಟ್ಟಾದರೆ, ಕ್ಲೇಮುದಾರನಿಂದ ಬಾಂಡನ್ನು ಪಡೆದುಕೊಂಡ ತರುವಾಯವಾಗಲಿ ಅಥವಾ ಅನ್ಯಥಾ ಆಗಲಿ ಆ ಒತ್ತೆಯನ್ನು ವಾಪಸು ಕೊಡಬಹುದು.

(3) ಯಾವುದೇ ಮುಖ್ಯ ವಿವರದಲ್ಲಿ ಅದು ಸುಳ್ಳಾಗಿರುವುದಾಗಿ ತಿಳಿದೂ ಅರ್ಜಿದಾರನಾಗಿಯೇ ಆಗಲಿ ಅಥವಾ ಅರ್ಜಿದಾರನನ್ನು ಗುರುತಿಸುವವನಾಗಿಯೇ ಆಗಲಿ (1)ನೇ ಉಪಪ್ರಕರಣದ ಮೇರೆಗೆ ಘೋಷಣೆಯನ್ನು ಮಾಡುವ ಯಾರೇ ವ್ಯಕ್ತಿಯು ಅಪರಾಧವು ನಿರ್ಣಯವಾದ ಮೇಲೆ ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**10. ಗಿರವಿದಾರರು ಪುಸ್ತಕಗಳನ್ನು ಇಡತಕ್ಕದ್ದು, ರಸೀದಿಗಳನ್ನು ಕೊಡತಕ್ಕದ್ದು, ಇತ್ಯಾದಿ:-** (1) ಪ್ರತಿಯೊಬ್ಬ ಗಿರವಿದಾರನೂ,-

(ಎ) ನಿಯಮಿಸಿದ ನಮೂನೆಯಲ್ಲಿನ ಒತ್ತೆ ಪುಸ್ತಕದಲ್ಲಿ, ಗಿರವಿ ಇಟ್ಟ ಪ್ರತಿಯೊಬ್ಬನಿಗೆ ಸಂಬಂಧಪಟ್ಟಂತೆ,-

(i) ಸಾಲದ ದಿನಾಂಕ,ಸಾಲದ ಅಸಲಿನ ಮೊಬಲಗು ಮತ್ತು ಪ್ರತಿ ವರ್ಷಕ್ಕಾಗಿ ಶೇಕಡಾ ಅಥವಾ ಪ್ರತಿ ರೂಪಾಯಿಗೆ ಪ್ರತಿ ತಿಂಗಳಿಗೆ ಅಥವಾ ಪ್ರತಿ ರೂಪಾಯಿಗೆ ಪ್ರತಿ ವರ್ಷಕ್ಕೆ ಸಾಲದ ಮೇಲೆ ವಿಧಿಸಿದ ಬಡ್ಡಿಯ ದರ;

(ii) ಆ ಸಾಲಕ್ಕೆ ಸಂಬಂಧಿಸಿದಂತೆ ಗಿರವಿದಾರನು ಸ್ವೀಕರಿಸಿದ ಪ್ರತಿಯೊಂದು ಸಂದಾಯದ ಮೊಬಲಗು ಮತ್ತು ಅಂಥ ಸಂದಾಯದ ದಿನಾಂಕ;

(iii) ಗಿರವಿಯಲ್ಲಿ ತೆಗೆದುಕೊಂಡ ವಸ್ತುವಿನ ಅಥವಾ ಪ್ರತಿಯೊಂದು ವಸ್ತುವಿನ ಪೂರ್ಣ ಮತ್ತು ವಿವರವಾದ ವಿವರಣೆ;

(iv) ಆ ಒತ್ತೆಯನ್ನು ಬಿಡಿಸಿಕೊಳ್ಳುವುದಕ್ಕಾಗಿ ಒಪ್ಪಿಕೊಂಡ ಕಾಲ;

(v) ಗಿರವಿ ಇಟ್ಟವನ ಹೆಸರು ಮತ್ತು ವಿಳಾಸ, ಮತ್ತು ಗಿರವಿ ಇಟ್ಟವನು ಗಿರವಿ ಇಟ್ಟ ವಸ್ತುವಿನ ಅಥವಾ ಯಾವುವೇ ವಸ್ತುವಿನ ಒಡೆಯನಾಗಿಲ್ಲದೇ ಇರುವಲ್ಲಿ, ಅದರ ಒಡೆಯನ ಹೆಸರು ಮತ್ತು ವಿಳಾಸ

- ಇವುಗಳನ್ನು, ಪ್ರತ್ಯೇಕವಾಗಿ ತೋರಿಸುವ ವಿವರವನ್ನು ನಿಯತವಾಗಿ ದಾಖಲು ಮಾಡತಕ್ಕದ್ದು ಮತ್ತು ಇಡತಕ್ಕದ್ದು ಅಥವಾ ದಾಖಲು ಮಾಡುವಂತೆ ಅಥವಾ ಇಡುವಂತೆ ಮಾಡತಕ್ಕದ್ದು;

(ಬಿ) ಅವನ ವ್ಯವಹಾರದಲ್ಲಿ ಈ ಕೆಳಕಂಡ ದಸ್ತಾವೇಜುಗಳನ್ನು ಮತ್ತು ಪುಸ್ತಕಗಳನ್ನು (ಅವುಗಳು ನಿಯಮಿಸಿದ ನಮೂನೆಯಲ್ಲಿರತಕ್ಕದ್ದು) ಇಡತಕ್ಕದ್ದು ಮತ್ತು ಬಳಸತಕ್ಕದ್ದು ಮತ್ತು ಅವುಗಳಿಗೆ ಕಾಲಕಾಲಕ್ಕೆ, ಸಂದರ್ಭವು ಅಗತ್ಯಪಡಿಸಿದಂತೆ ನಿಯಮಿಸಬಹುದಾದಂಥ ವಿವರಗಳನ್ನು ಮತ್ತು ಅಂಥ ನಿರ್ದೇಶನಗಳಿಗೆ ಅನುಸಾರವಾಗಿ ಸರಿಯಾದ ಮತ್ತು ಸ್ಪುಟವಾದ ರೀತಿಯಲ್ಲಿ ನಮೂದು ಮಾಡತಕ್ಕದ್ದು:-

(i) ಗಿರವಿ ಚೀಟಿ;

(ii) ಒತ್ತೆಗಳ ಬಗ್ಗೆ ಮಾರಾಟದ ಪುಸ್ತಕ;

(iii) ಒತ್ತೆಯನ್ನು ಒಡೆಯನು ಕ್ಲೇಮು ಮಾಡಿದ್ದರೆ, ಘೋಷಣೆ;

(iv) ಕಳೆದು ಹೋದ ಗಿರವಿ ಚೀಟಿಯ ಬಗ್ಗೆ ಘೋಷಣೆ; ಮತ್ತು

(v) ಒತ್ತೆಯನ್ನು ಬಿಡಿಸಿಕೊಂಡ ಮೇಲೆ ರಸೀದಿ;

(ಸಿ) ಗಿರವಿ ಇಟ್ಟವನಿಗೆ ಅಥವಾ ಅವನ ಏಜೆಂಟನಿಗೆ, ಅವನು ಸಂದಾಯ ಮಾಡಿದ ಪ್ರತಿಯೊಂದು ಮೊತ್ತಕ್ಕಾಗಿ ಕ್ರಮಬದ್ಧವಾಗಿ ರುಜು ಮಾಡಿದ ಮತ್ತು ಅವಶ್ಯವಾದರೆ ಅಂಥ ಸಂದಾಯದ ಕಾಲದಲ್ಲಿ ಸ್ಟಾಂಪನ್ನು ಹಚ್ಚಿದ ರಸೀದಿಯನ್ನು ಕೊಡತಕ್ಕದ್ದು; ಮತ್ತು

(ಡಿ) ಗಿರವಿ ಇಟ್ಟವನು ಬರಹದಲ್ಲಿ ಕೋರಿಕೊಂಡರೆ ಗಿರವಿ ಇಟ್ಟವನಿಗೆ ಅಥವಾ ಅವನು ಹಾಗೆ ಅಗತ್ಯಪಡಿಸಿದರೆ ಅವನ ಕೋರಿಕೆಯಲ್ಲಿ ಈ ಬಗ್ಗೆ ಅವನು ನಮೂದಿಸಿದ ಯಾರೇ ವ್ಯಕ್ತಿಗೆ (ಎ) ಖಂಡದಲ್ಲಿ ಉಲ್ಲೇಖಿಸಿದ ವಿವರಗಳನ್ನು ಮತ್ತು ಅಸಲು ಮತ್ತು ಬಡ್ಡಿಗಳನ್ನು ಬಾಕಿ ಉಳಿದಿರುವಂಥ ಮೊಬಲಗನ್ನು ಸಹ ತೋರಿಸುವ, ಅವನು ಅಥವಾ ಅವನ ಏಜೆಂಟನು ರುಜು ಮಾಡಿರುವ ಲೆಕ್ಕದ ವಿವರ ಪತ್ರವನ್ನು ಒದಗಿಸತಕ್ಕದ್ದು ಮತ್ತು ಅದಕ್ಕಾಗಿ ಫೀಜು ಎಂದು ರಾಜ್ಯ ಸರ್ಕಾರವು ನಿಯಮಿಸಬಹುದಾದಂಥ ಮೊತ್ತವನ್ನು ವಿಧಿಸತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಪುಸ್ತಕಗಳಲ್ಲಿ, ಲೆಕ್ಕಪತ್ರಗಳಲ್ಲಿ ಮತ್ತು ದಸ್ತಾವೇಜುಗಳಲ್ಲಿ ಮಾಡಿದ ಎಲ್ಲಾ ದಾಖಲೆಗಳು ಅಥವಾ ನಮೂದುಗಳು ನಿಯಮಿಸಬಹುದಾದಂತೆ ಇಂಗ್ಲೀಷಿನಲ್ಲಾಗಲಿ ಅಥವಾ ಕನ್ನಡದಲ್ಲಾಗಲಿ ಇರತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೂರು ವರ್ಷಗಳನ್ನು ಮೀರದಂಥ ಅವಧಿಗಾಗಿ ಯಾವುದೇ ಪ್ರದೇಶದಲ್ಲಿ ಯಾವುದೇ ಇತರ ಭಾಷೆಯ ಬಳಕೆಗೆ ಅನುಮತಿ ನೀಡಬಹುದು.

(3) (1) ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಎಲ್ಲಾ ಪುಸ್ತಕಗಳು, ಲೆಕ್ಕಪತ್ರಗಳು ಮತ್ತು ದಸ್ತಾವೇಜುಗಳು, ಮತ್ತು ಗಿರವಿದಾರನು ಇಟ್ಟುಕೊಂಡ ಎಲ್ಲಾ ಒತ್ತೆಗಳು, ಯಾವುದೇ ಕಾಲದಲ್ಲಿ ಲೈಸೆನ್ಸು ಕೊಡುವ ಪ್ರಾಧಿಕಾರಿಯ ಅಥವಾ ಆ ಪ್ರಾಧಿಕಾರಿಯು ಅಧಿಕೃತಗೊಳಿಸಿದ ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಅಧೀನವಾದ ಅಧಿಕಾರಿಯ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದು.

(4) ಭಾರತ ಸಾಕ್ಷ್ಯ ಅಧಿನಿಯಮ, 1872 (ಕೇಂದ್ರ ಅಧಿನಿಯಮ 1872ರ 1) ಇದರಲ್ಲಿ ಏನೇ ಅಡಕವಾಗಿದ್ದಾಗ್ಯೂ, ನಿಯಮಿಸಬಹುದಾದಂಥ ರೀತಿಯಲ್ಲಿ ಪ್ರಮಾಣೀಕರಿಸಿದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ ಆ ಲೆಕ್ಕದ ಪ್ರತಿಯು, ಮೂಲ ಲೆಕ್ಕದಂತೆ ಅದೇ ರೀತಿಯಲ್ಲಿ ಮತ್ತು ಅಷ್ಟರಮಟ್ಟಿಗೆ ಸಾಕ್ಷ್ಯದಲ್ಲಿ ಅಂಗೀಕಾರಾರ್ಹವಾಗಿರತಕ್ಕದ್ದು.

(5) (1)ನೇ ಉಪಪ್ರಕರಣದ (ಡಿ) ಖಂಡದ ಮೇರೆಗೆ ಯಾರಿಗೆ ಲೆಕ್ಕದ ವಿವರಪತ್ರವನ್ನು ಒದಗಿಸಲಾಗಿದೆಯೋ ಮತ್ತು ಯಾರು ಲೆಕ್ಕದ ಸರಿತನಕ್ಕೆ ಆಕ್ಷೇಪಿಸಲು ತಪ್ಪುವನೋ ಆ ಯಾರೇ ಗಿರವಿ ಇಟ್ಟವನು ಅಂಥ ತಪ್ಪುವಿಕೆ ಮಾತ್ರದಿಂದಲೇ ಅಂಥ ಲೆಕ್ಕದ ಸರಿತನವನ್ನು ಅಂಗೀಕರಿಸಿರುವುದಾಗಿ ಭಾವಿಸತಕ್ಕದ್ದಲ್ಲ.

(6) ಗಿರವಿ ಇಟ್ಟವನಿಗೆ ಒದಗಿಸಿದ ಗಿರವಿ ಚೀಟಿಯಲ್ಲಿ (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ಕೊಟ್ಟ ರಸೀದಿಯಲ್ಲಿ ಮತ್ತು ಆ ಉಪಪ್ರಕರಣದ (ಡಿ) ಖಂಡದ ಮೇರೆಗೆ ಒದಗಿಸಿದ ಲೆಕ್ಕದ ವಿವರಪತ್ರದಲ್ಲಿ ಅಂಕಿಗಳನ್ನು ಅರೇಬಿಕ್ ಅಂಕಿಗಳಲ್ಲಿ ಮಾತ್ರವೇ ನಮೂದಿಸತಕ್ಕದ್ದು.

**11. ಒತ್ತೆಯನ್ನು ಬಿಡಿಸಿಕೊಳ್ಳುವುದು:-** (1) ಪ್ರತಿಯೊಂದು ಒತ್ತೆಯನ್ನು, ಒತ್ತೆಯಿಟ್ಟ ದಿವಸದಿಂದ ಆ ದಿವಸವನ್ನು ಹೊರತುಪಡಿಸಿ ಒಂದುವರ್ಷದೊಳಗಾಗಿ ಬಿಡಿಸಿಕೊಳ್ಳತಕ್ಕದ್ದು; ಮತ್ತು ಬಿಡಿಸಿಕೊಳ್ಳುವ ಆ ವರ್ಷಕ್ಕೆ ಹದಿನೈದು ದಿವಸಗಳ ಹೆಚ್ಚಿನ ಅವಧಿಯನ್ನು ಸೇರಿಸತಕ್ಕದ್ದು, ಆ ಪ್ರತಿಯೊಂದು ಒತ್ತೆಯನ್ನು (ಬಿಡಿಸಿಕೊಳ್ಳುವ ಅವಧಿಯೊಳಗೆ ಬಿಡಿಸಿಕೊಂಡಿರದಿದ್ದರೆ) ಆ ಹೆಚ್ಚಿನ ಅವಧಿಯೊಳಗೆ ಅದನ್ನು ಬಿಡಿಸಿಕೊಳ್ಳುವ ಅವಕಾಶವು ಮುಂದುವರಿಯತಕ್ಕದ್ದು.

(2) ಹತ್ತು ರೂಪಾಯಿಗಳಿಗೆ ಮೀರದಂತೆ ಗಿರವಿ ಇಟ್ಟ ಒತ್ತೆಯನ್ನು ಬಿಡಿಸಿಕೊಳ್ಳುವ ಅವಧಿಯ ಮತ್ತು ಹೆಚ್ಚಿನ ಅವಧಿಯ ದಿವಸಗಳೊಳಗಾಗಿ ಬಿಡಿಸಿಕೊಳ್ಳದಿದ್ದರೆ, ಹೆಚ್ಚಿನ ಅವಧಿಯ ದಿವಸಗಳ ಕೊನೆಯಲ್ಲಿ ಅದು ಗಿರವಿದಾರನ ನಿರುಪಾಧಿಕ ಸ್ವತ್ತಾಗತಕ್ಕದ್ದು.

(3) ಹತ್ತು ರೂಪಾಯಿಗಳಿಗೆ ಮೀರಿದ ಮೊತ್ತಕ್ಕಾಗಿ ಗಿರವಿಯಿಟ್ಟ ಒತ್ತೆಯು, ಬಿಡಿಸಿಕೊಳ್ಳುವ ಅವಧಿಯ ಮತ್ತು ಹೆಚ್ಚಿನ ಅವಧಿಯ ದಿವಸಗಳು ಮುಕ್ತಾಯವಾಗಿದ್ದರೂ, ಈ ಅಧಿನಿಯಮದಲ್ಲಿ ಉಪಬಂಧಿಸಿದಂತೆ ಅದನ್ನು ವಿಲೆಗೊಳಿಸುವವರೆಗೆ ಬಿಡಿಸಿಕೊಳ್ಳುವ ಅವಕಾಶವು ಇನ್ನಷ್ಟು ಮುಂದುವರೆಯತಕ್ಕದ್ದು.

**ವಿವರಣೆ:-** ಪಕ್ಷಕಾರರ ನಡುವಣ ಕರಾರಿನಲ್ಲಿ, ಬಿಡಿಸಿಕೊಳ್ಳುವುದಕ್ಕಾಗಿ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿ ಅವಕಾಶ ಕಲ್ಪಿಸಿದ್ದರೆ ಅಂಥ ಹೆಚ್ಚಿನ ಅವಧಿಗಾಗಿ ಮಾಡಿದ ಉಲ್ಲೇಖಗಳನ್ನು, ಅದರಲ್ಲಿನ ಒಂದು ವರ್ಷದ ಅವಧಿಗೆ ಮಾಡಲಾದ ಉಲ್ಲೇಖಗಳಿಗೆ ಬದಲಾಗಿ ಪ್ರತಿಯೋಜಿಸಿದ್ದರೆ ಹೇಗೋ ಹಾಗೆ (1), (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳನ್ನು ಓದಿಕೊಳ್ಳತಕ್ಕದ್ದು ಮತ್ತು ಅರ್ಥೈಸತಕ್ಕದ್ದು.

**12. ಒತ್ತೆಯ ಮಾರಾಟ ಮತ್ತು ಮಾರಾಟ ಪುಸ್ತಕದ ಪರಿಶೀಲನೆ:-** (1) ಹತ್ತು ರೂಪಾಯಿಗಳಿಗಿಂತ ಹೆಚ್ಚಿನ ಮೊತ್ತಕ್ಕೆ ಗಿರವಿ ಇಟ್ಟ ಒತ್ತೆಯನ್ನು ಗಿರವಿದಾರನು ವಿಲೆ ಮಾಡುವಾಗ, ಅದನ್ನು ಹರಾಜಿನ ಮೂಲಕ ಮಾರಾಟ ಮಾಡುವ ಮೂಲಕ ವಿಲೆ ಮಾಡತಕ್ಕದ್ದು ಮತ್ತು ಅನ್ಯಥಾ ಅಲ್ಲ, ಮತ್ತು ಮಾರಾಟವನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ನಡೆಸತಕ್ಕದ್ದು.

(2) ಗಿರವಿದಾರನು, ತನ್ನಲ್ಲಿ ಗಿರವಿ ಇಟ್ಟ ಒತ್ತೆಗಾಗಿ (1)ನೇ ಉಪಪ್ರಕರಣದ ಮೇರೆಗೆ ನಡೆಸಲಾಗುವ ಬಹಿರಂಗ ಹರಾಜಿನ ಮಾರಾಟದಲ್ಲಿ ಸವಾಲು ಕೂಗಬಹುದು ಮತ್ತು ಅದನ್ನು ಖರೀದಿಸಬಹುದು ಮತ್ತು ಹಾಗೆ ಖರೀದಿಸಿದ ತರುವಾಯ ಅವನು ಆ ಒತ್ತೆಯ ನಿರುಪಾಧಿಕ ಒಡೆಯನಾಗತಕ್ಕದ್ದು.

(3) ಬಹಿರಂಗ ಹರಾಜಿನ ತರುವಾಯ ಮೂರು ವರ್ಷಗಳೊಳಗಾಗಿ ಯಾವುದೇ ಕಾಲದಲ್ಲಿ, ಗಿರವಿ ಚೀಟಿಯನ್ನು ಹೊಂದಿರುವವನು ಗಿರವಿದಾರನ ಪುಸ್ತಕದಲ್ಲಾಗಲಿ ಅಥವಾ ನಿಯಮಿಸಬಹುದಾದಂಥ ಹರಾಜಿನ ಸೂಚಿಪಟ್ಟಿಯಲ್ಲಾಗಲಿ ಆ ಮಾರಾಟಕ್ಕೆ ಸಂಬಂಧಿಸಿದ ನಮೂದನ್ನು ಪರಿಶೀಲಿಸಬಹುದು.

(4) (ಎ) ಅಂಥ ಪರಿಶೀಲನೆಯ ತರುವಾಯ, ಅಥವಾ ಅನ್ಯಥಾ ಮತ್ತು ಮಾರಾಟದ ಕಾಲದಲ್ಲಿ ಬಾಕಿಯಾದ ಸಾಲ ಮತ್ತು ಬಡ್ಡಿ ಮತ್ತು ವೆಚ್ಚಗಳ ಮೊಬಲಗಿಗಿಂತ ಹೆಚ್ಚಿನ ಮೊಬಲಗಿಗೆ ಆ ಒತ್ತೆಯನ್ನು ಮಾರಾಟ ಮಾಡಿರುವುದು ಕಂಡುಬಂದರೆ, ಗಿರವಿದಾರನು, ಗಿರವಿ ಚೀಟಿಯನ್ನು ಹೊಂದಿರುವವನಿಗೆ, ಆ ಮಾರಾಟದ ತರುವಾಯ ಮೂರು ವರ್ಷಗಳೊಳಗಾಗಿ ತಗಾದೆ ಮಾಡಿದರೆ, ಹೆಚ್ಚುವರಿ ಮೊಬಲಗನ್ನು, ಆ ಮಾರಾಟದ ಅವಶ್ಯಕ ಖರ್ಚುಗಳನ್ನು ಮತ್ತು ವೆಚ್ಚಗಳನ್ನು ಅದರಿಂದ ಕಳೆದು ಸಂದಾಯ ಮಾಡತಕ್ಕದ್ದು.

(ಬಿ) ಹಾಗೆ ತಗಾದೆ ಮಾಡಿದಾಗ, ಆ ಒತ್ತೆಯ ಮಾರಾಟದಿಂದ ಹೆಚ್ಚುವರಿ ಮೊಬಲಗು ಬಂದಿದೆಯೆಂದು ಆದರೆ ಅಂಥ ಮಾರಾಟಕ್ಕೆ ಮುಂಚೆ ಅಥವಾ ತರುವಾಯ ಹನ್ನೆರಡು ತಿಂಗಳೊಳಗೆ ಅದೇ ವ್ಯಕ್ತಿಯ ಇನ್ನೊಂದು ಒತ್ತೆಯ ಅಥವಾ ಒತ್ತೆಗಳ ಮಾರಾಟದಿಂದ ಖೋತಾ ಉಂಟಾಗಿದೆ ಎಂದು ಕಂಡುಬಂದರೆ, ಗಿರವಿದಾರನು ಆ ಖೋತಾವನ್ನು ಹೆಚ್ಚುವರಿ ಮೊಬಲಗಿಗೆ ವಜಾವಟ್ಟು ಮಾಡಬಹುದು ಮತ್ತು ಅಂಥ ವಜಾವಟ್ಟಿನ ತರುವಾಯ ಯಾವುದಾದರೂ ಶಿಲ್ಕು ಉಳಿದಿದ್ದರೆ ಅದನ್ನು ಮಾತ್ರ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು.

**13. ಬೆಂಕಿಯ ಸಂದರ್ಭದಲ್ಲಿ ಗಿರವಿದಾರನ ಹೊಣೆಗಾರಿಕೆ:-** (1) ಬೆಂಕಿಯಿಂದ ಅಥವಾ ಅದರ ಪರಿಣಾಮದಿಂದಾಗಿ ಒತ್ತೆಯು ನಾಶವಾಗಿದ್ದರೆ ಅಥವಾ ಹಾನಿಗೆ ಒಳಗಾಗಿದ್ದರೆ, ಗಿರವಿದಾರನು ಏನೇ ಆದರೂ, ಒತ್ತೆಯನ್ನು ಯಾವ ಅವಧಿಯೊಳಗಾಗಿ ಬಿಡಿಸಿಕೊಳ್ಳಬಹುದಾಗಿತ್ತೋ ಆ ಅವಧಿಯೊಳಗಾಗಿ ಅರ್ಜಿ ಸಲ್ಲಿಸಿದಾಗ ಅಸಲು ಮತ್ತು ಬಡ್ಡಿಯ ಮೊಬಲಗನ್ನು ಕಳೆದುಕೊಂಡ ತರುವಾಯ ಒತ್ತೆಯ ಮೌಲ್ಯವನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು.

**ವಿವರಣೆ:-** ಈ ಉಪಪ್ರಕರಣದ ಉದ್ದೇಶಕ್ಕಾಗಿ, ಆ ಒತ್ತೆಯ ಮೌಲ್ಯವು, ಅಸಲಿನ ಮೊಬಲಗಿನ ಮೇಲಿನ ಬಡ್ಡಿಯ ಜೊತೆಗೆ ಗಿರವಿ ಇಡುವ ಕಾಲದಲ್ಲಿ, ಗಿರವಿ ಪುಸ್ತಕದಲ್ಲಿ, ನಮೂದು ಮಾಡಿದ ಅದರ ಅಂದಾಜು ಮೌಲ್ಯ (ಯಾವುದಾದರೂ ಇದ್ದರೆ) ಅದು ಆಗಿರತಕ್ಕದ್ದು ಮತ್ತು ಯಾವುದೇ ಸಂದರ್ಭದಲ್ಲಿ ಅದು ಅಸಲಿನ ಮೊಬಲಗು ಮತ್ತು ಬಡ್ಡಿ ಮತ್ತು ಅಸಲಿನ ಮೊಬಲಗಿನ ಮೇಲೆ ಶೇಕಡಾ ಇಪ್ಪತ್ತೈದರಷ್ಟು ಇವುಗಳ ಒಟ್ಟು ಮೊತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ.

(2) ಗಿರವಿದಾರನು ಹಾಗೆ ಅಂದಾಜು ಮಾಡಿದ ಮೌಲ್ಯದ ಮಟ್ಟಿಗೆ ವಿಮೆ ಮಾಡಲು ಹಕ್ಕುಳ್ಳವನಾಗಿರತಕ್ಕದ್ದು.

**14. ಒತ್ತೆಯ ಇಳಿತಾಯಕ್ಕಾಗಿ ನಷ್ಟ ಪರಿಹಾರ:-** ಒತ್ತೆಯನ್ನು ಬಿಡಿಸಿಕೊಳ್ಳಲು ಹಕ್ಕುಳ್ಳ ಮತ್ತು ಕೋರುವ ವ್ಯಕ್ತಿಯು, ಒತ್ತೆಯನ್ನು ಬಿಡಿಸಿಕೊಳ್ಳುವ ದಾವೆಯನ್ನು ಪುರಸ್ಕರಿಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಲಯಕ್ಕೆ ಮನದಟ್ಟಾಗುವಂತೆ ಗಿರವಿದಾರನ ತಪ್ಪಿನಿಂದ, ನಿರ್ಲಕ್ಷ್ಯದಿಂದ ಅಥವಾ ಅಕ್ರಮ ಕಾರ್ಯದಿಂದ ಅಥವಾ ಆ ಮೂಲಕ, ಅದನ್ನು ಗಿರವಿ ಇಟ್ಟ ಕಾಲದಲ್ಲಿ ಅದು ಹೊಂದಿದ್ದ ಮೌಲ್ಯವು ಈಗ ಕಮ್ಮಿ ಆಗಿದೆ ಅಥವಾ ಕಡಿಮೆ ಆಗುವಂತೆ ಮಾಡಲಾಗಿದೆ ಎಂದು ತೋರಿಸಿದರೆ, ಆ ನ್ಯಾಯಾಲಯವು ಅದು ಸೂಕ್ತವೆಂದು ಯೋಚಿಸಿದರೆ, ಆ ಹಾನಿಗೆ ಸಂಬಂಧಿಸಿದಂತೆ ಒತ್ತೆಯ ಒಡೆಯನಿಗೆ ಯುಕ್ತ ನಷ್ಟ ಪರಿಹಾರಕ್ಕೆ ತೀರ್ಪುನೀಡಬಹುದು ಮತ್ತು ತೀರ್ಪಿನ ಅಂಥ ಮೊಬಲಗನ್ನು, ಗಿರವಿದಾರನಿಗೆ ಸಂದಾಯ ಮಾಡಬೇಕಾದ ಮೊಬಲಗಿನಿಂದ ಕಳೆದುಕೊಳ್ಳತಕ್ಕದ್ದು ಅಥವಾ ನ್ಯಾಯಾಲಯವು ನಿರ್ದೇಶಿಸುವಂಥ ರೀತಿಯಲ್ಲಿ ಗಿರವಿದಾರನು (ಸಂದರ್ಭವು ಅಗತ್ಯಪಡಿಸಿದಂತೆ) ಸಂದಾಯ ಮಾಡತಕ್ಕದ್ದು.

**15. ಗಿರವಿದಾರನು ಲೆಕ್ಕಪತ್ರಗಳಲ್ಲಿ ನಿರ್ದಿಷ್ಟಪಡಿಸುವುದಕ್ಕಿಂತ ಕಡಿಮೆ ಮೊಬಲಗನ್ನು ಸಾಲ ಕೊಡುವುದು ಅಥವಾ ಹೆಚ್ಚಿನ ಬಡ್ಡಿಯನ್ನು ಸ್ವೀಕರಿಸುವುದು ದಂಡನೀಯವಾಗತಕ್ಕದ್ದು:-** (1) ಗಿರವಿ ಚೀಟಿಯಲ್ಲಿ ಅಥವಾ ಅವನ ಲೆಕ್ಕಪತ್ರದಲ್ಲಿ ಅಥವಾ ರಿಜಿಸ್ಟರುಗಳಲ್ಲಿ ತೋರಿಸಿರುವುದಕ್ಕಿಂತ ಕಡಿಮೆ ಮೊಬಲಗನ್ನು ವಾಸ್ತವವಾಗಿ ಸಾಲವಾಗಿ ಕೊಡುವ, ಅಥವಾ ಗಿರವಿ ಚೀಟಿಯಲ್ಲಿ ಅಥವಾ ಅವನ ಲೆಕ್ಕಗಳಲ್ಲಿ ಅಥವಾ ರಿಜಿಸ್ಟರುಗಳಲ್ಲಿ ತೋರಿಸಿರುವುದಕ್ಕಿಂತ ಹೆಚ್ಚಿನ ದರದಲ್ಲಿ ಬಡ್ಡಿಯನ್ನು ಅಥವಾ ಯಾವುದೇ ಇತರ ವೆಚ್ಚವನ್ನು ತೆಗೆದುಕೊಳ್ಳುವ ಅಥವಾ ಸ್ವೀಕರಿಸುವ ಯಾರೇ ಗಿರವಿದಾರನು, ಅಪರಾಧವು ನಿರ್ಣಯವಾದ ಮೇಲೆ ಐದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಗಿರವಿದಾರನು ಅಂಥದೇ ಅಪರಾಧದ ಬಗ್ಗೆ ಈ ಹಿಂದೆ ಅಪರಾಧಿಯೆಂದು ನಿರ್ಣೀತನಾಗಿದ್ದ ತರುವಾಯ (1)ನೇ ಉಪಪ್ರಕರಣದ ಮೇರೆಗಿನ ಅಪರಾಧದ ಅಪರಾಧಿ ಎಂದು ನಿರ್ಣೀತನಾದರೆ ಅವನನ್ನು ಅಪರಾಧಿಯೆಂದು ನಿರ್ಣಯಿಸುವ ನ್ಯಾಯಾಲಯವು ಅವನ ಗಿರವಿದಾರ ಲೈಸೆನ್ಸನ್ನು ರದ್ದು ಮಾಡಲು ಆದೇಶಿಸಬಹುದು.

**16. ಗಿರವಿದಾರನ ಕೆಲವು ಇತರ ಕಾರ್ಯಗಳು ದಂಡನೀಯವಾಗತಕ್ಕದ್ದು:-** (1) ಹದಿನಾಲ್ಕು ವರ್ಷಗಳಿಗಿಂತ ಕಡಿಮೆ ವಯಸ್ಸಿನವನೆಂದು ಅಥವಾ ಮತ್ತೇರಿರುವುದಾಗಿ ಕಂಡುಬರುವ ಯಾರೇ ವ್ಯಕ್ತಿಯಿಂದ ಗಿರವಿಯಾಗಿ ವಸ್ತುವನ್ನು ತೆಗೆದುಕೊಳ್ಳುವ; ಅಥವಾ

(2) ಇನ್ನೊಬ್ಬ ಗಿರವಿದಾರನು ಕೊಟ್ಟ ಗಿರವಿ ಚೀಟಿಯನ್ನು ಗಿರವಿಯಲ್ಲಿ ಅಥವಾ ವಿನಿಮಯದಲ್ಲಿ ಖರೀದಿಸುವ ಅಥವಾ ತೆಗೆದುಕೊಳ್ಳುವ; ಅಥವಾ

(3) ಗಿರವಿಯಲ್ಲಿ ಒತ್ತೆಗಳನ್ನು ತೆಗೆದುಕೊಳ್ಳಲು ಹದಿನಾರು ವರ್ಷಗಳಿಗಿಂತ ಕಡಿಮೆ ವಯಸ್ಸಿನ ಯಾರೇ ವ್ಯಕ್ತಿಯನ್ನು ನಿಯೋಜಿಸಿಕೊಳ್ಳುವ; ಅಥವಾ

(4) ಯಾವುದೇ ಒತ್ತೆಯನ್ನು ಅದು ಅವನಲ್ಲಿ ಗಿರವಿ ಇದ್ದಾಗ ಬಹಿರಂಗ ಹರಾಜಿನಲ್ಲಿ ಹೊರತು, ಯಾವುದೇ ನೆಪದಲ್ಲಿ ಖರೀದಿ ಮಾಡುವ; ಅಥವಾ

(5) ಯಾವುದೇ ಒತ್ತೆಯನ್ನು ಅದು ಅವನಲ್ಲಿ ಗಿರವಿ ಇದ್ದಾಗ ಅದನ್ನು ತಾನೇ ಖರೀದಿಸುವ ದೃಷ್ಟಿಯಿಂದ ಬಿಡುಗಡೆ ಮಾಡಲು ಅವಕಾಶ ಮಾಡಿಕೊಡುವ; ಅಥವಾ

(6) ಬಿಡಿಸಿಕೊಳ್ಳುವ ಕಾಲದೊಳಗೆ ಅದರ ಖರೀದಿಗಾಗಿ, ಮಾರಾಟಕ್ಕಾಗಿ ಅಥವಾ ವಿಲೆಗಾಗಿ ಅಥವಾ ಯಾವುದೇ ವಸ್ತುವನ್ನು ಗಿರವಿ ಇಡುವ ಅಥವಾ ಗಿರವಿ ಇಡಲು ಕೋರುವ ಯಾರೇ ವ್ಯಕ್ತಿಯೊಂದಿಗೆ ಅಥವಾ ಅದರ ಒಡೆಯನೊಂದಿಗೆ ಯಾವುದೇ ಕರಾರನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳುವ; ಅಥವಾ

(7) ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಧಿಕೃತಗೊಳಿಸಲಾದಂಥ ಕಾಲದಲ್ಲಿ ಮತ್ತು ಅಂಥ ರೀತಿಯಲ್ಲಿ ಹೊರತು, ಅವನಲ್ಲಿ ಗಿರವಿ ಇಟ್ಟ ಯಾವುದೇ ಒತ್ತೆಯನ್ನು ಮಾರಾಟ ಮಾಡುವ, [1][ಆಧಾರ ಮಾಡುವ, ಗಿರವಿ ಇಡುವ][1] ಅನ್ಯಥಾ ವಿಲೆ ಗಿರವಿದಾರನು ಮಾಡುವ ಅಪರಾಧವು ನಿರ್ಣಯವಾದ ಮೇಲೆ ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

[1][ಪರಂತು, (7)ನೇ ಖಂಡದಲ್ಲಿ ಉಲ್ಲೇಖಿಸಿದ ಕಾರ್ಯಕ್ಕಾಗಿ ಕಾರಾವಾಸದ ಅವಧಿಯು ಒಂದು ತಿಂಗಳಿಗಿಂತ ಕಡಿಮೆಯಿರತಕ್ಕದ್ದಲ್ಲ ಮತ್ತು ಜುಲ್ಮಾನೆಯು ಐದು ನೂರು ರೂಪಾಯಿಗಳಿಗಿಂತ ಕಡಿಮೆಯಿರತಕ್ಕದ್ದಲ್ಲ.][1]

**[1][16ಎ. ಗಿರವಿದಾರನು ಒತ್ತೆಗಳನ್ನು ಬಿಡಿಸಿಕೊಳ್ಳತಕ್ಕದ್ದು:-** (1) ಕರ್ನಾಟಕ ಗಿರವಿದಾರರ (ತಿದ್ದುಪಡಿ) ಅಧಿನಿಯಮ, 1979ರ ಪ್ರಾರಂಭಕ್ಕೆ ಮುಂಚೆ ಯಾರೇ ಗಿರವಿದಾರನು ಯಾರೇ ವ್ಯಕ್ತಿಯಲ್ಲಿ ಯಾವುದೇ ಒತ್ತೆಯನ್ನು ಗಿರವಿ ಇಟ್ಟಿರುವಲ್ಲಿ ಅಥವಾ ಆಧಾರ ಮಾಡಿರುವಲ್ಲಿ, ಅಂಥ ಗಿರವಿದಾರನು, ಅಂಥ ಪ್ರಾರಂಭದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ ಒತ್ತೆಯನ್ನು ಬಿಡಿಸಿಕೊಳ್ಳತಕ್ಕದ್ದು.

(2) ಹಾಗೆ ಬಿಡಿಸಿಕೊಳ್ಳಲು ತಪ್ಪುವ ಯಾರೇ ಗಿರವಿದಾರನು ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಕಾರಾವಾಸದಿಂದ ಮತ್ತು ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು:

ಪರಂತು, ಕಾರಾವಾಸದ ಅವಧಿಯು ಒಂದು ತಿಂಗಳಿಗಿಂತ ಕಡಿಮೆಯಿರತಕ್ಕದ್ದಲ್ಲ ಮತ್ತು ಜುಲ್ಮಾನೆಯು ಐದು ನೂರು ರೂಪಾಯಿಗಳಿಗಿಂತ ಕಡಿಮೆಯಿರತಕ್ಕದ್ದಲ್ಲ.][1]

**17. ಗಿರವಿ ಇಟ್ಟವರ ಕೆಲವು ಕಾರ್ಯಗಳು ದಂಡನೀಯವಾಗತಕ್ಕದ್ದು:-** (1) ಯಾರೇ ವ್ಯಕ್ತಿಯು,-

(ಎ) ವಸ್ತುವನ್ನು ಯಾವ ಮೂಲದಿಂದ ಸ್ವಾಧೀನ ಹೊಂದಿರುವನೋ ಆ ಮೂಲದ ಬಗ್ಗೆ ತೃಪ್ತಿಕರ ವಿವರವನ್ನು ಕೊಡಲು ಅಸಮರ್ಥನಾಗಿದ್ದು ಅಥವಾ ನಿರಾಕರಿಸುತ್ತಿದ್ದು ಗಿರವಿಗೆ ಆ ವಸ್ತುವನ್ನು ಇಟ್ಟುಕೊಳ್ಳಬೇಕೆಂದು ಗಿರವಿದಾರನಿಗೆ ಕೊಟ್ಟರೆ; ಅಥವಾ

(ಬಿ) ಗಿರವಿದಾರನಿಗೆ ಗಿರವಿ ಇಟ್ಟುಕೊಳ್ಳಲು ಕೊಡ ಮಾಡುವ ವಸ್ತು ಅವನದೇ ಆದ ಸ್ವತ್ತೇ ಅಥವಾ ಅಲ್ಲವೆ ಎಂಬ ಬಗ್ಗೆ ಅಥವಾ ಅವನ ಹೆಸರು ಮತ್ತು ವಿಳಾಸದ ಬಗ್ಗೆ ಅಥವಾ ವಸ್ತುವಿನ ಒಡೆಯನ ಹೆಸರು ಮತ್ತು ವಿಳಾಸದ ಬಗ್ಗೆ ಗಿರವಿದಾರನಿಗೆ ಉದ್ದೇಶಪೂರ್ವಕವಾಗಿ ಸುಳ್ಳು ಮಾಹಿತಿ ಕೊಟ್ಟರೆ;

(ಸಿ) ಒತ್ತೆಯನ್ನು ಬಿಡಿಸಿಕೊಳ್ಳಲು ಹಕ್ಕನ್ನು ಹೊಂದಿಲ್ಲದೆ ಇರುವ ಮತ್ತು ಅದನ್ನು ಬಿಡಿಸಿಕೊಳ್ಳಲು ಕಾನೂನಿನ ಮೂಲಕ ಯಾವುದೇ ಸ್ವಾಮ್ಯದ ಹಕ್ಕನ್ನು ಹೊಂದಿಲ್ಲದೆ ಅದನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದರೆ ಅಥವಾ ಶ್ರಮಿಸಿದರೆ

- ಆ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಬರುವ ಪ್ರತಿಯೊಂದು ಪ್ರಕರಣದಲ್ಲಿ ಮತ್ತು ಗಿರವಿದಾರನಿಗೆ ವಸ್ತುವನ್ನು ಗಿರವಿಗೆ, ಮಾರಾಟಕ್ಕಾಗಿ ಅಥವಾ ಅನ್ಯಥಾ ಕೊಡಮಾಡುವ ಯಾವುದೇ ಪ್ರಕರಣದಲ್ಲಿ ಸಹ, ಗಿರವಿದಾರನು ಅದು ಕದ್ದದ್ದು ಅಥವಾ ಅನ್ಯಥಾ ಅದನ್ನು ಕಾನೂನು ಬಾಹಿರವಾಗಿ ಅಥವಾ ಮುಚ್ಚುಮರೆಯಿಂದ ಪಡೆಯಲಾಗಿದೆ ಎಂದು ಸಕಾರಣವಾಗಿ ಶಂಕಿಸಿದರೆ, ಆ ಗಿರವಿದಾರನು, ಯುಕ್ತ ಕಾರಣ ಇಲ್ಲದಿದ್ದರೆ, ಸಂಬಂಧಪಟ್ಟ ವ್ಯಕ್ತಿಯ ಹೆಸರು ಮತ್ತು ವಿಳಾಸದ ಬಗ್ಗೆ ವಿಚಾರಣೆ ಮಾಡತಕ್ಕದ್ದು ಮತ್ತು ಅಂಥ ವ್ಯಕ್ತಿ ಮತ್ತು ಆ ವಸ್ತುವನ್ನು ಅಥವಾ ಅವುಗಳಲ್ಲಿ ಯಾವುದನ್ನಾದರೂ ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ತಡೆಹಿಡಿದಿಡತಕ್ಕದ್ದು, ಮತ್ತು ತತ್‌ಕ್ಷಣ ಆ ಪ್ರಕರಣದ ಸಂಗತಿಗಳನ್ನು ಅತಿಸಮೀಪದ ಪೊಲೀಸು ಠಾಣೆಗೆ ತಿಳಿಸತಕ್ಕದ್ದು ಮತ್ತು ವ್ಯಕ್ತಿಯನ್ನು ಮತ್ತು ವಸ್ತುವನ್ನು ಅಥವಾ ಅವುಗಳಲ್ಲಿ ಯಾವುದನ್ನಾದರೂ (ಸಾಧ್ಯವಾದಷ್ಟು ಬೇಗ) ಪೊಲೀಸರ ವಶಕ್ಕೊಪ್ಪಿಸತಕ್ಕದ್ದು.

(3) ಕಳವು ಮಾಡಲಾಗಿದೆ ಎಂದು ನಂಬಲಾದ ಸ್ವತ್ತುಗಳ ಪಟ್ಟಿಯನ್ನು ಪೊಲೀಸರು ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆದ ಯಾರೇ ಗಿರವಿದಾರನಿಗೆ ವಶಕ್ಕೊಪ್ಪಿಸಬಹುದು ಮತ್ತು ತರುವಾಯ,-

(ಎ) ಯಾವುದೇ ಅಂಥ ಪಟ್ಟಿಯಲ್ಲಿ ವಿವರಿಸಲಾದ ಯಾವುದೇ ಸ್ವತ್ತಿನ ವಿವರಣೆಗೆ ಅನುಗುಣವಾಗಿರುವ ಯಾವುದೇ ಸ್ವತ್ತನ್ನು ಅವನಿಗೆ ಗಿರವಿಯಲ್ಲಿ ಮಾರಾಟಕ್ಕಾಗಿ ಅಥವಾ ಅನ್ಯಥಾ ಕೊಡಮಾಡಿದರೆ, (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಮುಂದುವರೆಯುವುದು; ಮತ್ತು

1. 1979ರ ಅಧಿನಿಯಮ ಸಂಖ್ಯೆ 29ರ ಮೂಲಕ 1-8-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಅಂಥ ಯಾವುದೇ ವಸ್ತುವು ಈಗಾಗಲೇ ಅವನ ಸ್ವಾಧೀನದಲ್ಲಿದ್ದರೆ, ತತ್‌ಕ್ಷಣವೇ ಆ ಪ್ರಕರಣದ ಸಂಗತಿಗಳನ್ನು (ಗಿರವಿದಾರನಿಗೆ ಆ ವಸ್ತುವನ್ನು ಕೊಡುವ ಆ ವ್ಯಕ್ತಿಯ ಹೆಸರು ಮತ್ತು ವಿಳಾಸದ ಬಗ್ಗೆ ಪೂರ್ಣ ವಿವರಗಳನ್ನೊಳಗೊಂಡು) ಅತಿ ಸಮೀಪದ ಪೊಲೀಸ್ ಠಾಣೆಗೆ ತಿಳಿಸುವುದು ಮತ್ತು ಪೊಲೀಸರು ಹಾಗೆ ಅಗತ್ಯಪಡಿಸಿದರೆ, ಆ ವಸ್ತುವನ್ನು ಅವರಿಗೆ ವಶಕ್ಕೊಪ್ಪಿಸುವುದು ಸಹ

- ಅಂಥ ಗಿರವಿದಾರನ ಕರ್ತವ್ಯವಾಗಿರತಕ್ಕದ್ದು.

**18. ಅಧಿನಿಯಮದ ಉಲ್ಲಂಘನೆಗಾಗಿ ಸಾಮಾನ್ಯ ದಂಡನೆ, ಇತ್ಯಾದಿ:-** (1)ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಉಪಬಂಧಗಳನ್ನು ಅಥವಾ ಮಂಜೂರು ಮಾಡಿದ ಲೈಸೆನ್ಸಿನ ಯಾವುದೇ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘಿಸುವ ಯಾರೇ ಆಗಲಿ, ಅಂಥ ಉಲ್ಲಂಘನೆಗಾಗಿ ಈ ಅಧಿನಿಯಮದಲ್ಲಿ ಬೇರೆ ಕಡೆ ಯಾವುದೇ ಇತರ ದಂಡನೆಯನ್ನು ಉಪಬಂಧಿಸದಿದ್ದರೆ, ಅಪರಾಧವು ನಿರ್ಣಯವಾದ ಮೇಲೆ ಐವತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಅಂಥ ವ್ಯಕ್ತಿಯು ಈ ಹಿಂದೆ ಈ ಪ್ರಕರಣದ ಮೇರೆಗೆ ಆಗಲಿ ಅಥವಾ ಈ ಅಧಿನಿಯಮದಲ್ಲಿ ಒಳಗೊಂಡ ಯಾವುದೇ ಇತರ ಉಪಬಂಧದ ಮೇರೆಗೆ ಆಗಲಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) 3ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಗಿರವಿದಾರನ ವ್ಯವಹಾರವನ್ನು ನಡೆಸುತ್ತಿರುವ ಅಥವಾ ನಡೆಸುವುದನ್ನು ಮುಂದುವರೆಸುತ್ತಿರುವ ಅಪರಾಧದ ಅಪರಾಧಿಯೆಂದು ನಿರ್ಣೀತನಾದ ತರುವಾಯ ಯಾರೇ ವ್ಯಕ್ತಿಯು ಅದೇ ಅಪರಾಧವನ್ನು ಅದೇ ವರ್ಷದಲ್ಲಿ ಮಾಡುವುದನ್ನು ಮುಂದುವರೆಸಿದರೆ (1)ನೇ ಉಪಪ್ರಕರಣದ ಮೇರೆಗೆ ಅವನು ಯಾವ ಜುಲ್ಮಾನೆಗೆ ಗುರಿಯಾಗಿರುವನೋ ಆ ಜುಲ್ಮಾನೆಯ ಜೊತೆಗೆ, ಹಾಗೆ ಅಪರಾಧ ಮಾಡುವುದನ್ನು ಅವನು ಮುಂದುವರಿಸುವಂಥ ಅವಧಿಯಲ್ಲಿ ಅಪರಾಧ ನಿರ್ಣಯದ ಹಿಂದಿನ ದಿನಾಂಕದ ತರುವಾಯ ಪ್ರತಿಯೊಂದು ದಿವಸಕ್ಕಾಗಿ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಮತ್ತಷ್ಟು ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) 10ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದ ಉಪಬಂಧಗಳ ಉಲ್ಲಂಘನೆಯ ಬಗ್ಗೆ ಗಿರವಿದಾರನನ್ನು ಅಪರಾಧಿಯೆಂದು ನಿರ್ಣಯಿಸುವ ಯಾವುದೇ ನ್ಯಾಯಾಲಯವು ಆ ಖಂಡದ ಉಪಬಂಧಗಳಿಗೆ ಅನುಸಾರವಾಗಿ ಲೆಕ್ಕದ ವಿವರ ಪತ್ರವನ್ನು ಒದಗಿಸಲು ಅವನಿಗೆ ನಿರ್ದೇಶಿಸಬಹುದು ಮತ್ತು ಆ ಗಿರವಿದಾರನು ಆ ನಿರ್ದೇಶನವನ್ನು ಪಾಲಿಸಲು ತಪ್ಪಿದರೆ, ನ್ಯಾಯಾಲಯವು, ಅವನ ಗಿರವಿದಾರ ಲೈಸೆನ್ಸನ್ನು ರದ್ದುಪಡಿಸಲು ಆದೇಶಿಸಬಹುದು.

**19. ಅಪರಾಧಗಳನ್ನು ಅಧಿವಿಚಾರಣೆ ಮಾಡಲು ಅಧಿಕಾರ ವ್ಯಾಪ್ತಿ:-** ಎರಡನೇ ದರ್ಜೆಯ ಮ್ಯಾಜಿಸ್ಟ್ರೇಟನಿಗೆ ಕಡಿಮೆ ದರ್ಜೆಯ ಯಾವುದೇ ನ್ಯಾಯಾಲಯವು ಈ ಅಧಿನಿಯಮದ ವಿರುದ್ಧದ ಯಾವುದೇ ಅಪರಾಧವನ್ನು ಅಧಿವಿಚಾರಣೆ ಮಾಡತಕ್ಕದ್ದಲ್ಲ.

[1][19ಎ. **ಹಿಂದೂ ಅವಿಭಕ್ತ ಕುಟುಂಬ, ಕಂಪನಿಗಳು, ಇತ್ಯಾದಿಗಳಿಂದ ಅಪರಾಧಗಳು:-** (1) ಈ ಅಧಿನಿಯಮದ ಯಾವುದೇ ಉಪಬಂಧವನ್ನು ಹಿಂದೂ ಅವಿಭಕ್ತ ಕುಟುಂಬವು ಉಲ್ಲಂಘಿಸಿದರೆ ಅಂಥ ಕುಟುಂಬದ ವ್ಯವಹಾರದ ವ್ಯವಸ್ಥಾಪನೆಗಾಗಿ ಜವಾಬ್ದಾರನಾದ ವ್ಯಕ್ತಿಯು ಅಂಥ ಉಪಬಂಧವನ್ನು ಉಲ್ಲಂಘಿಸಿರುವುದಾಗಿ ಭಾವಿಸತಕ್ಕದ್ದು.

(2) (ಎ) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿದ್ದರೆ ಅಪರಾಧವನ್ನು ಮಾಡಿದ ಕಾಲದಲ್ಲಿ ಆ ಕಂಪನಿಯ ವ್ಯವಹಾರವನ್ನು ನಡೆಸುವುದಕ್ಕಾಗಿ ಆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಹಾಗೂ ಕಂಪನಿಯೂ ಸಹ ಆ ಅಪರಾಧದ ತಪ್ಪಿತಸ್ಥನಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಈ ಖಂಡದಲ್ಲಿ ಇರುವುದು ಯಾವುದೂ, ಅಪರಾಧವು ಅವನಿಗೆ ತಿಳಿಯದೆ ಮಾಡಲಾಗಿದೆಯೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಗಟ್ಟಲು ಅವನು ಎಲ್ಲ ಯುಕ್ತ ಶ್ರದ್ಧೆಯನ್ನು ವಹಿಸಿದ್ದನೆಂದು ರುಜುವಾತುಪಡಿಸಿದರೆ ಅಂಥ ಯಾರೇ ವ್ಯಕ್ತಿಯನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(ಬಿ) (ಎ) ಖಂಡದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿದ್ದರೆ ಮತ್ತು ಆ ಅಪರಾಧವು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆಯೆಂದು ಅಥವಾ ಆ ಅಪರಾಧವು ಅವನ ಯಾವುದೇ ನಿರ್ಲಕ್ಷ್ಯತೆಯಿಂದಾಗಿ ಆಗಿದೆ ಎಂದು ಹೇಳಬಹುದಾಗಿದೆ ಎಂದು ರುಜುವಾತು ಆಗಿರುವಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನೂ ಸಹ ಆ ಅಪರಾಧದ ಬಗ್ಗೆ ತಪ್ಪಿತಸ್ಥನಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ಅವನು ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ:-** ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) "ಕಂಪನಿ" ಎಂದರೆ ನಿಗಮಿತ ನಿಕಾಯ ಮತ್ತು ಇದು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿಗೆ ಸಂಬಂಧಪಟ್ಟಂತೆ "ನಿರ್ದೇಶಕ" ಎಂದರೆ ಆ ಫರ್ಮಿನ ಪಾಲುಗಾರ][1].

1. 1979ರ ಅಧಿನಿಯಮ ಸಂಖ್ಯೆ 29ರ ಮೂಲಕ 1-8-1979ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**20. ಕೆಲವು ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದು:-** (ಎ) 16ನೇ ಪ್ರಕರಣದ (7)ನೇ ಖಂಡದಲ್ಲಿ ಉಲ್ಲೇಖಿಸಿದ ಕಾರ್ಯಕ್ಕಾಗಿ;

(ಬಿ) 16ಎ ಪ್ರಕರಣದ ಮೇರೆಗೆ; ಮತ್ತು

(ಸಿ) 3ನೇ ಪ್ರಕರಣದ ಉಪಬಂಧಗಳ ಉಲ್ಲಂಘನೆಗಾಗಿ 18ನೇ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧಗಳು

-ಸಂಜ್ಞೇಯವಾಗಿರತಕ್ಕದ್ದು.][1]

**21. ಗಿರವಿಯ ಕರಾರು ಕೆಲವು ಸಂದರ್ಭಗಳಲ್ಲಿ ಅನೂರ್ಜಿತವಾಗಿರತಕ್ಕದ್ದು ಮತ್ತು ಕೆಲವು ಇತರ ಸಂದರ್ಭಗಳಲ್ಲಿ ಅನೂರ್ಜಿತವಾಗತಕ್ಕದ್ದಲ್ಲ:-** ಈ ಅಧಿನಿಯಮದ ಮೇರೆಗೆ ಲೈಸೆನ್ಸನ್ನು ಪಡೆಯದ ಯಾರೇ ಗಿರವಿದಾರನು, ಸಾಲ ಕೊಡಲು ಗಿರವಿಗೆ ಯಾವುದೇ ವಸ್ತುವನ್ನು ತೆಗೆದುಕೊಂಡರೆ, ಗಿರವಿ ಇಡಲಾದ ವಸ್ತುವಿಗೆ ಸಂಬಂಧಿಸಿದಂತೆ ಗಿರವಿಯ ಕರಾರು, ಗಿರವಿದಾರನಿಗೆ ಯಾರೇ ಹಕ್ಕನ್ನು ಪ್ರದಾನ ಮಾಡುವಷ್ಟರಮಟ್ಟಿಗೆ ಅನೂರ್ಜಿತವಾಗತಕ್ಕದ್ದು ಮತ್ತು ಅಂಥ ಗಿರವಿದಾರನು ಆ ವಸ್ತುವನ್ನು ಇಟ್ಟುಕೊಳ್ಳುವುದು ಅಕ್ರಮವಾಗಿರತಕ್ಕದ್ದು.

(2) ಗಿರವಿದಾರನು ಈ ಅಧಿನಿಯಮದ ವಿರುದ್ಧ ಅಪರಾಧದ (ಲೈಸನ್ಸುಗಳಿಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಯಾವುದೇ ಉಪಬಂಧಗಳಿಗೆ ವಿರುದ್ಧವಾದ ಅಪರಾಧವಾಗಿಲ್ಲದ) ತಪ್ಪಿತಸ್ಥನಾಗಿದ್ದರೆ, ಗಿರವಿದಾರನು ಅವನ ವ್ಯವಹಾರಕ್ಕೆ ಸಂಬಂಧಿಸಿದಂತೆ ಅವನು ಮಾಡಿಕೊಂಡ ಗಿರವಿಯ ಯಾವುದೇ ಕರಾರು ಅಥವಾ ಇತರ ಕರಾರು ಏನೇ ಆದಾಗ್ಯೂ, ಆ ಅಪರಾಧದ ಕಾರಣ ಮಾತ್ರದಿಂದಲೇ ಅನೂರ್ಜಿತವಾಗತಕ್ಕದ್ದಲ್ಲ ಅಥವಾ ಅವನು ಆ ಅಪರಾಧದ ಕಾರಣ ಮಾತ್ರದಿಂದಲೇ ಒತ್ತೆಯ ಮೇಲಿನ ಅವನ ಸ್ವಾಧೀನತೆಯನ್ನು ಅಥವಾ ಹಕ್ಕನ್ನು ಅಥವಾ ಅದಕ್ಕೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ಸಾಲ ಮತ್ತು ಬಡ್ಡಿ ಮತ್ತು ಇತರ ವೆಚ್ಚಗಳು ಯಾವುದಾದರೂ ಇದ್ದರೆ ಅವುಗಳನ್ನು ಕಳೆದುಕೊಳ್ಳತಕ್ಕದ್ದಲ್ಲ:

ಪರಂತು, ಗಿರವಿದಾರನು7ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಗಿರವಿ ಚೀಟಿಯನ್ನು ಗಿರವಿ ಇಟ್ಟವನಿಗೆ ವಶಕ್ಕೊಪ್ಪಿಸಲು ತಪ್ಪಿದರೆ ಅಥವಾ 10ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ರಸೀತಿಯನ್ನು ಗಿರವಿ ಇಟ್ಟವನಿಗೆ ಅಥವಾ ಅವನ ಏಜೆಂಟನಿಗೆ ಕೊಡಲು ಅಥವಾ ಈ ಉಪಪ್ರಕರಣದ (ಡಿ) ಖಂಡದ ಮೇರೆಗೆ ಕೋರಿಕೆ ಸಲ್ಲಿಸಿದ್ದರೆ ಅದರಲ್ಲಿ ಅಗತ್ಯಪಡಿಸಲಾದಂತೆ ಲೆಕ್ಕದ ವಿವರಪತ್ರವನ್ನು, ಅಂಥ ಕೋರಿಕೆಯನ್ನು ಮಾಡಿದ ತರುವಾಯ ಒಂದು ತಿಂಗಳೊಳಗೆ ಒದಗಿಸಲು ತಪ್ಪಿದರೆ, ಆ ಗಿರವಿದಾರನು ಹಾಗೆ ತಪ್ಪಿದ ಅವಧಿಗಾಗಿ ಯಾವುದೇ ಬಡ್ಡಿಗೆ ಹಕ್ಕುಳ್ಳವನಾಗಿರತಕ್ಕದ್ದು:

ಮತ್ತೂ ಪರಂತು, ಸಾಲಕ್ಕೆ ಸಂಬಂಧಪಟ್ಟಂತೆ ಯಾವುದೇ ದಾವೆಯಲ್ಲಿ ಅಥವಾ ವ್ಯವಹರಣೆಯಲ್ಲಿ, ನ್ಯಾಯಾಲಯಕ್ಕೆ, ಗಿರವಿದಾರನು, 10ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದ ಅಥವಾ (ಬಿ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಲೆಕ್ಕಪತ್ರಗಳನ್ನು ಇಟ್ಟಿಲ್ಲವೆಂದು ಕಂಡುಬಂದರೆ ಅವನ ಖರ್ಚುಗಳನ್ನು ಅವನಿಗೆ ಕೊಡತಕ್ಕದ್ದಲ್ಲ.

**22. ನಿಯಮ ರಚನಾಧಿಕಾರ:-** (1)ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳು,-

(ಎ) ನಿಯಮಿಸಬೇಕೆಂದು ಈ ಅಧಿನಿಯಮದ ಮೂಲಕ ವ್ಯಕ್ತವಾಗಿ ಅಗತ್ಯಪಡಿಸಲಾದ ಅಥವಾ ಅನುಮತಿಸಲಾದ ಎಲ್ಲ ವಿಷಯಗಳು;

(ಬಿ) ಈ ಅಧಿನಿಯಮದ ಮೇರೆಗೆ ಗಿರವಿದಾರನ ಲೈಸೆನ್ಸಿಗಾಗಿನ ಅರ್ಜಿಯ ನಮೂನೆ ಮತ್ತು ಅದರಲ್ಲಿ ಒಳಗೊಂಡಿರಬೇಕಾದ ವಿವರಗಳು; ಮತ್ತು

(ಸಿ) ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು ಮತ್ತು ದಸ್ತಾವೇಜುಗಳನ್ನು ಯಾವ ನಮೂನೆಯಲ್ಲಿ ದಾಖಲು ಮಾಡತಕ್ಕದ್ದೋ, ಇಡತಕ್ಕದ್ದೋ ಅಥವಾ ಬಳಸತಕ್ಕದ್ದೋ ಆ ನಮೂನೆ

- ಇವುಗಳಿಗಾಗಿ ಉಪಬಂಧಿಸಬಹುದು.

(3) ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿವಸಗಳ ಅವಧಿಯವರೆಗೆ ಇಡತಕ್ಕದ್ದು, ಮತ್ತು ಅದನ್ನು ಹಾಗೆ ಇಟ್ಟಂಥ ಅಧಿವೇಶನ ಅಥವಾ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗಿರತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಭಾದಕವನ್ನುಂಟು ಮಾಡತಕ್ಕದ್ದಲ್ಲ.

1. 1979ರ ಅಧಿನಿಯಮ ಸಂಖ್ಯೆ 29ರ ಮೂಲಕ 1-8-1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**23. ಉಳಿಸುವಿಕೆಗಳು:-** (1) ಈ ಅಧಿನಿಯಮದಲ್ಲಿ ಇರುವುದು ಯಾವುದೂ, ಅಂಥ ಅಧಿಸೂಚನೆಯಲ್ಲಿ ಗೊತ್ತುಪಡಿಸಿದ ದಿನಾಂಕದಿಂದ ಆರು ತಿಂಗಳುಗಳು ಮುಕ್ತಾಯವಾಗುವುದಕ್ಕೆ ಮುಂಚೆ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಈ ಅಧಿನಿಯಮವನ್ನು ಜಾರಿಗೆ ತರಲಾದಂಥ ಪ್ರದೇಶದಲ್ಲಿ ಒತ್ತೆಯ ಮೇಲೆ ಕೊಟ್ಟ ಯಾವುದೇ ಸಾಲಕ್ಕೆ ಅನ್ವಯವಾಗತಕ್ಕದ್ದಲ್ಲ.

(2) ಈ ಅಧಿನಿಯಮದ ಉಪಬಂಧಗಳು [1][ಕರ್ನಾಟಕ][1] ಲೇವಾದೇವಿದಾರರ ಅಧಿನಿಯಮ, 1961 ಇದರ ಉಪಬಂಧಗಳ ಜೊತೆಗೆ ಇರತಕ್ಕದ್ದು.

**24. ನಿರಸನ:-** [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶದಲ್ಲಿ][1] ಜಾರಿಯಲ್ಲಿರುವಂತೆ ಮದರಾಸು ಗಿರವಿದಾರರ ಅಧಿನಿಯಮ, 1943 (1943ರ ಮದರಾಸು ಅಧಿನಿಯಮ ಸಂಖ್ಯೆ XXIII)ನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 ([1][ಕರ್ನಾಟಕ][1] ಅಧಿನಿಯಮ 1899ರ III) ಇದರ 6ನೇ ಪ್ರಕರಣವು, ಸದರಿ ಅಧಿನಿಯಮಿತಿಯ ನಿರಸನಕ್ಕೆ ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳು ನಿರಸನಗೊಳಿಸಿದ ಅಧಿನಿಯಮವನ್ನು ಈ ಅಧಿನಿಯಮದ ಮೂಲಕ ನಿರಸನಗೊಳಿಸಲಾಗಿದ್ದಿದ್ದರೆ ಮತ್ತು ಪುನರ್ ಅಧಿನಿಯಮಗೊಳಿಸಿದ್ದಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**ಅಧಿಸೂಚನೆ ಬೆಂಗಳೂರು, ದಿನಾಂಕ 26ನೇ ಆಗಸ್ಟ್, 1966 [ಸಂಖ್ಯೆ ಡಿಪಿಸಿ 271 ಸಿಸಿಸಿ 66]**

ಮೈಸೂರು ಗಿರವಿದಾರರ ಅಧಿನಿಯಮ, 1961 (1962ರ ಮೈಸೂರು ಅಧಿನಿಯಮ ಸಂಖ್ಯೆ 13) ಇದರ 1ನೇ ಪ್ರಕರಣದ (3)ನೇ ಉಪಪ್ರಕರಣದ (ಬಿ) ಖಂಡದ ಮೂಲಕ ಪ್ರದಾನ ಮಾಡಿದ ಅಧಿಕಾರಗಳನ್ನು ಚಲಾಯಿಸಿ ಮತ್ತು ದಿನಾಂಕ 28ನೇ ಜುಲೈ 1966ರ ಮೈಸೂರು ರಾಜ್ಯಪತ್ರದ ಭಾಗ IV ವಿಭಾಗ 2ಸಿ (ii) ನಲ್ಲಿ ಎಸ್.ಓ. 4958 ನೆಯದಾಗಿ ಪ್ರಕಟಿಸಲಾದ ದಿನಾಂಕ 19ನೇ ಜುಲೈ 1966ರ ಅಧಿಸೂಚನೆ ಸಂಖ್ಯೆ ಎ.ಎಫ್. 43:ಸಿಸಿಎಸ್: 62ನ್ನು ರದ್ದುಗೊಳಿಸಿ, ಮೈಸೂರು ಸರ್ಕಾರವು, 1966ರ ಅಕ್ಟೋಬರ್ ಮೊದಲನೇ ದಿವಸವನ್ನು ಮೈಸೂರು ರಾಜ್ಯದ ಮುಂಬಯಿ ಪ್ರದೇಶ, ಹೈದರಾಬಾದ್ ಪ್ರದೇಶ, ಕೊಡಗು ಜಿಲ್ಲೆ ಮತ್ತು ಮೈಸೂರು ಪ್ರದೇಶದಲ್ಲಿ ಸದರಿ ಅಧಿನಿಯಮವು ಜಾರಿಗೆ ಬರತಕ್ಕಂಥ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಭರಣಯ್ಯ,** ಕಾರ್ಯದರ್ಶಿ.

**ಕರ್ನಾಟಕ ಗಿರವಿದಾರರ ನಿಯಮಗಳು, 1966**
**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

## ಕರ್ನಾಟಕ ಗಿರವಿದಾರರ ನಿಯಮಗಳು, 1966

**(ಜಿಎಸ್‌ಆರ್ 347 ದಿನಾಂಕ 9-10-1969; ಜಿಎಸ್‌ಆರ್ 66 ದಿನಾಂಕ 25-2-1971; ಜಿಎಸ್‌ಆರ್ 223 ದಿನಾಂಕ 17-9-1985 ಮತ್ತು ಜಿಎಸ್‌ಆರ್ 77 ದಿನಾಂಕ 16-3-1988ರ ಮೂಲಕ ತಿದ್ದುಪಡಿಯಾದಂತೆ)**

**ಅಧಿಸೂಚನೆ**

**ಬೆಂಗಳೂರು, ದಿನಾಂಕ 19ನೇ ಜುಲೈ, 1966.**

**ಜಿ.ಎಸ್.ಆರ್.1077:-** ಕರ್ನಾಟಕ ಗಿರವಿದಾರರ ಅಧಿನಿಯಮ, 1961 (ಕರ್ನಾಟಕ ಅಧಿನಿಯಮ 1962ರ 13) ಇದರ 22ನೇ ಪ್ರಕರಣದ ಮೂಲಕ ಪ್ರದಾನ ಮಾಡಿದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಕೆಳಕಂಡ ನಿಯಮಗಳನ್ನು ರಚಿಸುತ್ತದೆ. ಅದರ ಕರಡನ್ನು ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಿದಂತೆ 1964ರ ಜುಲೈ 9ನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ಭಾಗ IV ರಲ್ಲಿ ಪ್ರಕಟಿಸಲಾಗಿದೆ, ಎಂದರೆ:-

1. **ಹೆಸರು:-** (1) ಈ ನಿಯಮಗಳನ್ನು ಕರ್ನಾಟಕ ಗಿರವಿದಾರರ ನಿಯಮಗಳು, 1966 ಎಂದು ಕರೆಯತಕ್ಕದ್ದು.

2. **ಪರಿಭಾಷೆಗಳು:-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಅಧಿನಿಯಮ" ಎಂದರೆ ಕರ್ನಾಟಕ ಗಿರವಿದಾರರ ಅಧಿನಿಯಮ, 1961;

(ಬಿ) "ನಮೂನೆ" ಎಂದರೆ ಈ ನಿಯಮಗಳಿಗೆ ಜೋಡಿಸಲಾದ ನಮೂನೆ;

(ಸಿ) "ಲೈಸೆನ್ಸ್ ಕೊಡುವ ಪ್ರಾಧಿಕಾರಿ" ಎಂದರೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961 ಇದರ ಮೇರೆಗೆ ನೇಮಕಗೊಂಡ ಲೇವಾದೇವಿದಾರರ ರಿಜಿಸ್ಟ್ರಾರ್;

(ಡಿ) "ಪ್ರಕರಣ" ಎಂದರೆ ಈ ಅಧಿನಿಯಮದ ಪ್ರಕರಣ.

[1][**2ಎ. ಗೊತ್ತುಪಡಿಸಿದ ಪ್ರಾಧಿಕಾರಿ:-** ಲೇವಾದೇವಿದಾರರ ರಿಜಿಸ್ಟ್ರಾರ್ ಜನರಲ್‌ನು 4ಬಿ ಪ್ರಕರಣದ ಉದ್ದೇಶಕ್ಕಾಗಿ ಗೊತ್ತುಪಡಿಸಿದ ಪ್ರಾಧಿಕಾರಿಯಾಗಿರತಕ್ಕದ್ದು.][1]

3. **ಲೈಸೆನ್ಸಿಗಾಗಿ ಅರ್ಜಿ:-** (1) ಸಾಲಕ್ಕಾಗಿ ಗಿರವಿಗೆ ಸರಕುಗಳನ್ನು ಮತ್ತು ಚರಸ್ವತ್ತುಗಳನ್ನು ತೆಗೆದುಕೊಳ್ಳುವ ವ್ಯವಹಾರವನ್ನು ನಡೆಸಲು ಇಚ್ಛಿಸುವ ವ್ಯಕ್ತಿಯು, ಗಿರವಿದಾರರ ಲೈಸೆನ್ಸಿಗಾಗಿ, ಅವನು ವ್ಯವಹಾರವನ್ನು ನಡೆಸುವಂಥ ಪ್ರದೇಶಕ್ಕಾಗಿನ ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಅವರ ವಿಳಾಸಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು, ಅರ್ಜಿಯನ್ನು ಲೇವಾದೇವಿದಾರರ ಅಧಿನಿಯಮ, 1961ರ ಮೇರೆಗೆ ಹಾಗೆಂದು ನೇಮಕಗೊಂಡ ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರ್‌ನ ಕಛೇರಿಯಲ್ಲಿ, ಕಛೇರಿಯ ವೇಳೆಗಳಲ್ಲಿ, ಅರ್ಜಿದಾರನು ಖುದ್ದಾಗಿಯೇ ಆಗಲಿ ಅಥವಾ ಈ ಬಗ್ಗೆ ಬರವಣಿಗೆಯಲ್ಲಿ ಕ್ರಮಬದ್ಧವಾಗಿ ಅಧಿಕೃತಗೊಳಿಸಿದ ಏಜೆಂಟನ ಮೂಲಕವಾಗಿಯೇ ಆಗಲಿ ಒಪ್ಪಿಸತಕ್ಕದ್ದು ಅಥವಾ ಅಂಥ ಸಹಾಯಕ ರಿಜಿಸ್ಟ್ರಾರನಿಗೆ ಅವರ ವಿಳಾಸಕ್ಕೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(2) ಮೊದಲನೆಯ ಬಾರಿಗಾಗಿ ಲೈಸೆನ್ಸನ್ನು ಮಂಜೂರು ಮಾಡುವುದಕ್ಕಾಗಿನ ಅರ್ಜಿಯನ್ನು ಯಾವುದೇ ಕಾಲದಲ್ಲಿ ಸಲ್ಲಿಸಬಹುದು ಮತ್ತು ಲೈಸೆನ್ಸಿನ ನವೀಕರಣಕ್ಕಾಗಿನ ಅರ್ಜಿಯನ್ನು, [2][ಪ್ರತಿ ವರ್ಷದ ಅಕ್ಟೋಬರ್ ಕೊನೆಯ ದಿನಾಂಕಕ್ಕೆ ಮೊದಲು][2] ಸಲ್ಲಿಸತಕ್ಕದ್ದು:

[3][ಪರಂತು, ಮೊದಲನೆಯ ಬಾರಿಗೆ ಲೈಸೆನ್ಸು ಮಂಜೂರು ಮಾಡುವುದಕ್ಕಾಗಿ ಅರ್ಜಿಯನ್ನು ಆ ವರ್ಷದ ನವೆಂಬರ್ ಮೊದಲನೆಯ ದಿನದ ಮತ್ತು ಡಿಸೆಂಬರ್ ಮೂವತ್ತೊಂದನೇ ದಿನದ ನಡುವೆ ಸಲ್ಲಿಸಿದ್ದರೆ, ತರುವಾಯ ಬರುವ ವರ್ಷಕ್ಕಾಗಿ ಲೈಸೆನ್ಸು ನವೀಕರಣದ ಅರ್ಜಿಯನ್ನು ಲೈಸೆನ್ಸಿನ ಅವಧಿಯ ಮುಕ್ತಾಯಕ್ಕೆ ಮುಂಚೆ ಸಲ್ಲಿಸತಕ್ಕದ್ದು][3].

4. **ಲೈಸೆನ್ಸು ಫೀಜುಗಳ ಸಂದಾಯದ ರೀತಿ:-** ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ನವೀಕರಣಕ್ಕಾಗಿನ ಅರ್ಜಿಗೆ ಸಂಬಂಧಿಸಿದಂತೆ ಸಂದಾಯವಾಗಬೇಕಾದ ಫೀಜನ್ನು, ಅರ್ಜಿಯನ್ನು ಸಲ್ಲಿಸುವ ಕಾಲದಲ್ಲಿ ನಗದು ರೂಪದಲ್ಲೇ ಆಗಲಿ ಅಥವಾ ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರನಿಗೆ ಅವರ ವಿಳಾಸಕ್ಕೆ ಮನಿ ಆರ್ಡರ್ ಮೂಲಕವಾಗಿಯೇ ಆಗಲಿ ಅಥವಾ ಖಜಾನೆಯಲ್ಲಿ, ಉಪಖಜಾನೆಯಲ್ಲಿ ಅಥವಾ ಭಾರತದ ರಿಸರ್ವ್ ಬ್ಯಾಂಕಿನಲ್ಲಿ ಸರ್ಕಾರದ ಲೆಕ್ಕಕ್ಕೆ ಜಮೆ ಮಾಡುವ ಮೂಲಕವಾಗಿಯೇ ಆಗಲಿ ಸಂದಾಯ ಮಾಡತಕ್ಕದ್ದು. ಸಂದರ್ಭಾನುಸಾರ ಮನಿ ಆರ್ಡರನ್ನು ಕಳುಹಿಸಿದ ರಸೀತಿ, ಅಥವಾ ಖಜಾನೆ ಅಥವಾ ಬ್ಯಾಂಕ್ ಚಲನ್‌ಅನ್ನು ಅಂಥ ಅರ್ಜಿಗೆ ಲಗತ್ತಿಸಿರತಕ್ಕದ್ದು.

[4][**4ಎ. ಭದ್ರತಾ ಮೊತ್ತದ ಸಂದಾಯ:-** (1) ಪ್ರತಿಯೊಬ್ಬ ಲೈಸೆನ್ಸುದಾರನು, 4ಎ ಪ್ರಕರಣದಲ್ಲಿ ಗೊತ್ತುಪಡಿಸಿದ ಭದ್ರತಾ ಮೊತ್ತವನ್ನು ಲೈಸೆನ್ಸ್ ಕೊಡುವ ಪ್ರಾಧಿಕಾರಿಯು ಅಧಿಸೂಚಿಸಿದ ಲೆಕ್ಕದ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಗದಾಗಿ ಠೇವಣಿ ಇಡತಕ್ಕದ್ದು.

1. ಜಿಎಸ್‌ಆರ್ 223 ಅಧಿಸೂಚನೆ ಸಂಖ್ಯೆ ಸಿಎಮ್‌ಡಬ್ಲ್ಯೂ 2 ಸಿಎಮ್‌ಎಲ್ 85, ದಿನಾಂಕ 12/13-9-1985ರ ಮೂಲಕ 17-9-1985ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. ಜಿಎಸ್‌ಆರ್ 77, ಅಧಿಸೂಚನೆ ಸಂಖ್ಯೆ ಸಿಎಮ್‌ಡಬ್ಲ್ಯೂ 2 ಸಿಎಮ್‌ಎಲ್ 88, ದಿನಾಂಕ 16-3-1988ರ ಮೂಲಕ 16-3-1988ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. ಜಿಎಸ್‌ಆರ್ 77, ಅಧಿಸೂಚನೆ ಸಂಖ್ಯೆ ಸಿಎಮ್‌ಡಬ್ಲ್ಯೂ 2 ಸಿಎಮ್‌ಎಲ್ 88, ದಿನಾಂಕ 16-3-199ರ ಮೂಲಕ, ದಿನಾಂಕ: 16-3-1988 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. ಜಿಎಸ್‌ಆರ್ 223 ಅಧಿಸೂಚನೆ ಸಂಖ್ಯೆ ಸಿಎಮ್‌ಡಬ್ಲ್ಯೂ 2 ಸಿಎಮ್‌ಎಲ್ 85, ದಿನಾಂಕ: 12/13-9-1985ರ ಮೂಲಕ 17-9-1985ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಭದ್ರತಾ ಮೊತ್ತವನ್ನು ಠೇವಣಿ ಇಟ್ಟು ಪಡೆದಿರುವ ಖಜಾನೆಯ ರಸೀತಿಯನ್ನು ಲೈಸೆನ್ಸ್ ಕೊಡುವ ಪ್ರಾಧಿಕಾರಿಗೆ ಕಳುಹಿಸತಕ್ಕುದು.

**4ಬಿ. 4ಬಿ ಪ್ರಕರಣದ ಮೇರೆಗಿನ ಆದೇಶವನ್ನು ತಿಳಿಸುವುದು:-** 4ಬಿ ಪ್ರಕರಣದ ಮೇರೆಗೆ ಲೈಸೆನ್ಸ್ ಕೊಡುವ ಪ್ರಾಧಿಕಾರಿಯ ಪ್ರತಿಯೊಂದು ಆದೇಶವನ್ನು ಲೈಸೆನ್ಸುದಾರನಿಗೆ ಖುದ್ದಾಗಿ ಅಥವಾ ಅವನ ಏಜೆಂಟನಿಗೆ ಅಥವಾ ಲೈಸೆನ್ಸುದಾರನ ವಾಸಸ್ಥಳಕ್ಕೆ ಅಥವಾ ವ್ಯವಹಾರದ ಸ್ಥಳಕ್ಕೆ ಅಥವಾ ಕೊನೆಯದಾಗಿ ತಿಳಿಯಬಂದ ವಾಸಸ್ಥಳಕ್ಕೆ ಅಥವಾ ವ್ಯವಹಾರದ ಸ್ಥಳಕ್ಕೆ, ತಲುಪೊಪ್ಪಿಗೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸಿಕೊಡತಕ್ಕುದು.

**4ಸಿ. ಮುಟ್ಟುಗೋಲು ಹಾಕಿಕೊಂಡ ಮೊತ್ತದಿಂದ ಸಂದಾಯ:-** 1. ಲೈಸೆನ್ಸುದಾರನ ಕೃತ್ಯದಿಂದ ಬಾಧಿತನಾದ ಸಾಲಪಡೆದವನು, ಕ್ಲೇಮಿನ ಸ್ವರೂಪವನ್ನು ಮತ್ತು ಅಂಥ ಲೈಸೆನ್ಸುದಾರನಿಂದ ತನಗೆ ಬಾಕಿ ಬರಬೇಕಾದ ಮೊತ್ತವನ್ನು ನಿರ್ದಿಷ್ಟ ಪಡಿಸಿರುವ ಅರ್ಜಿಯನ್ನು ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಸಲ್ಲಿಸತಕ್ಕುದು.

2. ಲೈಸನ್ಸು ಕೊಡುವ ಪ್ರಾಧಿಕಾರಿಯು, (1)ನೇ ಉಪನಿಯಮದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ನಡೆಸಿ, ಮುಟ್ಟುಗೋಲು ಹಾಕಿಕೊಂಡ ಮೊತ್ತದಲ್ಲಿ ಅರ್ಜಿದಾರನಿಗೆ ಕೊಡಬೇಕಾದ ಮೊತ್ತವನ್ನು ನಿರ್ಧರಿಸತಕ್ಕುದು:

ಪರಂತು ಒಬ್ಬನಿಗಿಂತ ಹೆಚ್ಚು ಅರ್ಜಿದಾರರು ಇದ್ದರೆ ಮೊತ್ತವನ್ನು ಅರ್ಜಿದಾರರಿಗೆ ಸಂದಾಯಮಾಡಲು ನಿರ್ಧರಿಸಿದ ಮೊತ್ತದಲ್ಲಿ ಪ್ರಮಾಣಾನುಸಾರವಾಗಿ ದಾಮಾಷಾ ಪ್ರಕಾರ ಸಂದಾಯ ಮಾಡತಕ್ಕುದು.

**4ಡಿ. ಭದ್ರತಾ ಮೊತ್ತದ ಮರುಸಂದಾಯ:-** 1. ತನ್ನ ವ್ಯವಹಾರವನ್ನು ಮುಚ್ಚಿಕೊಂಡಿರುವ ಅಥವಾ ತನ್ನ ಲೈಸೆನ್ಸ್‌ಅನ್ನು ನವೀಕರಿಸದಿರುವ ಲೈಸೆನ್ಸುದಾರನು, 4ಎ ಪ್ರಕರಣದ ಮೇರೆಗೆ ಠೇವಣಿ ಇಟ್ಟಿದ್ದ ಮೊತ್ತದ ಮರುಸಂದಾಯಕ್ಕೆ ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಅರ್ಜಿಸಲ್ಲಿಸಬಹುದು.

2. ಲೈಸೆನ್ಸು ಕೊಡುವ ಪ್ರಾಧಿಕಾರಿಯು, (1)ನೇ ಉಪನಿಯಮದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಲೈಸೆನ್ಸುದಾರನು ತನ್ನ ವ್ಯವಹಾರವನ್ನು ಮುಚ್ಚಿದ್ದಾನೆಂಬುದನ್ನಾಗಲಿ ಅಥವಾ ತನ್ನ ಲೈಸೆನ್ಸ್‌ಅನ್ನು ನವೀಕರಿಸಿಲ್ಲ ಎಂಬುದನ್ನಾಗಲಿ ಮತ್ತು ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಯಾವುವೇ ಉಪಬಂಧಗಳ ಉಲ್ಲಂಘನೆಗೆ ಸಂಬಂಧಿಸಿದಂತೆ ಅವನ ವಿರುದ್ಧ ಯಾವ ಮೊಕದ್ದಮೆಯೂ ಇತ್ಯರ್ಥದಲ್ಲಿಲ್ಲ ಎಂಬುದನ್ನು ಖಚಿತಪಡಿಸಿಕೊಂಡ ತರುವಾಯ, 4ಎ ಪ್ರಕರಣದ ಮೇರೆಗೆ ಠೇವಣಿ ಇಟ್ಟಿದ್ದ ಮೊತ್ತವನ್ನು ಅಥವಾ 4ಬಿ ಪ್ರಕರಣದ ಮೇರೆಗೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ತರುವಾಯ ಅದರಲ್ಲಿ ಉಳಿದಿರುವಷ್ಟನ್ನು ಯಾವುದಾದರೂ ಇದ್ದರೆ, ಅದನ್ನು ಮರುಸಂದಾಯ ಮಾಡುವುದಕ್ಕೆ ಆದೇಶವನ್ನು ಮಾಡಬಹುದು.][3]

**5. ಲೈಸೆನ್ಸಿನ ಮಂಜೂರಾತಿ ಅಥವಾ ನವೀಕರಣ:-** ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರನು ಲೈಸೆನ್ಸಿಗಾಗಿನ ಅರ್ಜಿದಾರನ ಪ್ರಾಮಾಣಿಕತೆಯ ಬಗ್ಗೆ ಅಂಥ ವಿಚಾರಣೆಗಳನ್ನು ಮಾಡಿದ ತರುವಾಯ, ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಅರ್ಜಿಗಳನ್ನು ಕಳುಹಿಸತಕ್ಕುದು. ಅವನು ಸೂಕ್ತವೆಂದು ಭಾವಿಸುವಂಥ ಇನ್ನೂ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ ಅದನ್ನು ಮಾಡಿದ ತರುವಾಯ 4ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಆದೇಶದ ಮೂಲಕ ಆ ಲೈಸೆನ್ಸನ್ನು ಮಂಜೂರು ಮಾಡಬಹುದು, ನವೀಕರಿಸಬಹುದು, ಅದನ್ನು ಮಂಜೂರು ಮಾಡಲು ಅಥವಾ ನವೀಕರಿಸಲು ನಿರಾಕರಿಸಬಹುದು. ಲೈಸೆನ್ಸನ್ನು ಮಂಜೂರು ಮಾಡಿದರೆ ಅಥವಾ ಅದನ್ನು ನವೀಕರಿಸಿದರೆ, ಅದು ಅದರಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೊಳಪಟ್ಟು, 'ಬಿ' ಮತ್ತು 'ಸಿ' ನಮೂನೆಗಳಲ್ಲಿ ಇರತಕ್ಕುದು.

**6. ಲೈಸೆನ್ಸನ್ನು ಮಂಜೂರು ಮಾಡಲು ಅಥವಾ ನವೀಕರಿಸಲು ನಿರಾಕರಿಸಿರುವುದಕ್ಕೆ ಕಾರಣಗಳನ್ನು ಅರ್ಜಿದಾರನಿಗೆ ತಿಳಿಸತಕ್ಕುದು:-** ಲೈಸೆನ್ಸನ್ನು ಕೊಡುವ ಪ್ರಾಧಿಕಾರಿಯು ಲೈಸೆನ್ಸನ್ನು ಮಂಜೂರು ಮಾಡಲು ಅಥವಾ ನವೀಕರಣ ಮಾಡಲು ನಿರಾಕರಿಸಿದರೆ ಹಾಗೆ ಮಾಡಿರುವುದಕ್ಕೆ ಕಾರಣಗಳನ್ನು, ಬರವಣಿಗೆಯಲ್ಲಿ ದಾಖಲು ಮಾಡತಕ್ಕುದು ಮತ್ತು ಅವುಗಳನ್ನು ಅರ್ಜಿದಾರನಿಗೆ ತಿಳಿಸತಕ್ಕುದು.

**7. ಲೈಸೆನ್ಸನ್ನು ಮಂಜೂರು ಅಥವಾ ನವೀಕರಣ ಮಾಡಲು ನಿರಾಕರಿಸುವ ಆದೇಶದ ವಿರುದ್ಧ ಅಪೀಲು:-** (1) ಲೈಸೆನ್ಸನ್ನು ಮಂಜೂರು ಮಾಡಲು ಅಥವಾ ನವೀಕರಿಸಲು ನಿರಾಕರಿಸುವ ಲೈಸೆನ್ಸು ಕೊಡುವ ಪ್ರಾಧಿಕಾರಿಯ ಆದೇಶದ ವಿರುದ್ಧ ಅಪೀಲನ್ನು, ಕರ್ನಾಟಕ ಲೇವಾದೇವಿದಾರರ ಅಧಿನಿಯಮ, 1961ರ ಮೇರೆಗೆ ಹಾಗೆಂದು ನೇಮಕಗೊಂಡ ಲೇವಾದೇವಿದಾರರ ರಿಜಿಸ್ಟ್ರಾರ್ ಜನರಲ್‌ನಿಗೆ ಸಲ್ಲಿಸತಕ್ಕುದು ಮತ್ತು ಅದನ್ನು, ನಿರಾಕರಣೆಯ ಆದೇಶವನ್ನು ಅರ್ಜಿದಾರನಿಗೆ ತಿಳಿಸಿದಂಥ ದಿನಾಂಕದಿಂದ 30 ದಿವಸಗಳ ಅವಧಿಯೊಳಗೆ ದಾಖಲು ಮಾಡತಕ್ಕುದು.

(2) ಅಪೀಲು ಪ್ರಾಧಿಕಾರಿಯು, ಸಂದರ್ಭಾನುಸಾರ ಅಪೀಲುದಾರನಿಗೆ ಅಥವಾ ಅವನ ನ್ಯಾಯವಾದಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ ಅಪೀಲನ್ನು ತೀರ್ಮಾನಿಸತಕ್ಕುದು.

**8. ಲೈಸೆನ್ಸುಗಳ ಪ್ರದರ್ಶನ:-** ಪ್ರತಿಯೊಬ್ಬ ಗಿರವಿದಾರನು, ಅವನು ಗಿರವಿದಾರನ ವ್ಯವಹಾರವನ್ನು ನಡೆಸುತ್ತಿರುವ ಆವರಣದಲ್ಲಿ ಎದ್ದು ಕಾಣುವ ಸ್ಥಳದಲ್ಲಿ ಅವನ ಲೈಸೆನ್ಸನ್ನು ಪ್ರದರ್ಶಿಸತಕ್ಕುದು. ಅವನ ಲೈಸೆನ್ಸ್ ಸಂಖ್ಯೆಯನ್ನು, ಅವನು ಯಾವ ಹೆಸರಿನಲ್ಲಿ ವ್ಯವಹಾರವನ್ನು ನಡೆಸುವನೋ ಆ ಹೆಸರನ್ನು ಪ್ರದರ್ಶಿಸುವ ಗುರುತು ಹಲಗೆಯ ಮೇಲೆ ಸೂಚಿಸತಕ್ಕುದು:

ಪರಂತು, ಲೇವಾದೇವಿದಾರರ ರಿಜಿಸ್ಟ್ರಾರ್ ಜನರಲ್ ಅಥವಾ ಲೇವಾದೇವಿದಾರರ ರಿಜಿಸ್ಟ್ರಾರನು, ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು ಯಾರೇ ಗಿರವಿದಾರನನ್ನು ಈ ನಿಯಮದ ಎಲ್ಲಾ ಅಥವಾ ಯಾವುದೇ ಉಪಬಂಧಗಳ ಪ್ರವರ್ತನೆಯಿಂದ ವಿನಾಯಿತಿಗೊಳಿಸಬಹುದು.

**9. ಲೈಸೆನ್ಸಿನ ದ್ವಿಪ್ರತಿಯನ್ನು ಕೊಡುವುದು:-** (1) ಈ ನಿಯಮಗಳ ಮೇರೆಗೆ ಮಂಜೂರು ಮಾಡಿದ ಲೈಸೆನ್ಸು ಕಳೆದುಹೋದರೆ, ನಾಶವಾದರೆ, ಅಥವಾ ಓದಲಾಗದಂಥ ರೀತಿಯಲ್ಲಿ ಹರಿದು ಹೋದರೆ ಅಥವಾ ಅನ್ಯಥಾ ವಿರೂಪಗೊಂಡರೆ, ಗಿರವಿದಾರನು, ಲೈಸೆನ್ಸಿನ ದ್ವಿಪ್ರತಿಯ ಮಂಜೂರಾತಿಗಾಗಿ ಸಂಬಂಧಪಟ್ಟ ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರನ ಮೂಲಕ ಲೈಸೆನ್ಸ್ ಕೊಡುವ ಪ್ರಾಧಿಕಾರಿಗೆ ಅರ್ಜಿಯನ್ನು ಸಲ್ಲಿಸಬಹುದು.

(2) ಮೂಲ ಲೈಸೆನ್ಸು ಹರಿದು ಹೋದ ಅಥವಾ ವಿರೂಪಗೊಂಡ ಕಾರಣದಿಂದಾಗಿ ಲೈಸೆನ್ಸಿನ ದ್ವಿಪ್ರತಿಯ ಅಗತ್ಯವಿದ್ದಲ್ಲಿ, ಲೇವಾದೇವಿದಾರನು ಲೈಸೆನ್ಸ್ ಕೊಡುವ ಪ್ರಾಧಿಕಾರಿಗೆ (1)ನೇ ಉಪನಿಯಮದ ಮೇರೆಗೆ ಸಲ್ಲಿಸಿದ ಅರ್ಜಿಯ ಜೊತೆಗೆ ಮೂಲ ಲೈಸೆನ್ಸನ್ನು ಒಪ್ಪಿಸತಕ್ಕುದು.

(3) (1)ನೇ ಉಪನಿಯಮದ ಮೇರೆಗಿನ ಅರ್ಜಿಯ ಜೊತೆಗೆ ಒಂದು ರೂಪಾಯಿಯ ಫೀಜು ಇರತಕ್ಕುದು ಮತ್ತು ಅದನ್ನು 4ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿಯೇ ಸಂದಾಯ ಮಾಡತಕ್ಕುದು.

(4) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಲೈಸೆನ್ಸು ಕೊಡುವ ಪ್ರಾಧಿಕಾರಿಯು ಅವನು ಅವಶ್ಯವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ, ಗಿರವಿದಾರನಿಗೆ ಲೈಸೆನ್ಸಿನ ದ್ವಿಪ್ರತಿಯನ್ನು ಕೊಡಬಹುದು ಎಂದು ಅವನಿಗೆ ಮನದಟ್ಟಾದರೆ, ಅವನು ಲೈಸೆನ್ಸಿನ ದ್ವಿಪ್ರತಿಯನ್ನು ಕೊಡಬಹುದು ಮತ್ತು ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರನಿಗೆ, ಅವನು ಇಟ್ಟಿರುವ ಲೈಸೆನ್ಸುಗಳ ರಿಜಿಸ್ಟರಿನಲ್ಲಿನ ಆ ಗಿರವಿದಾರನ ಹೆಸರಿನ ಎದುರಿಗೆ, ಅಂಥ ಲೈಸೆನ್ಸಿನ ದ್ವಿಪ್ರತಿಯನ್ನು ಅವನಿಗೆ ಕೊಟ್ಟ ಬಗ್ಗೆ ಟಿಪ್ಪಣಿ ಮಾಡುವಂತೆ ನಿರ್ದೇಶಿಸತಕ್ಕುದು.

(5) ಹಾಗೆ ಕೊಟ್ಟ ದ್ವಿಪ್ರತಿ ಲೈಸೆನ್ಸು, ಮೂಲ ಲೈಸೆನ್ಸಿನ ಸಂಖ್ಯೆಯನ್ನು ಮತ್ತು ದಿನಾಂಕವನ್ನು ಹೊಂದಿರತಕ್ಕುದು ಮತ್ತು "ದ್ವಿಪ್ರತಿ" ಎಂಬ ಪದವನ್ನು ಸಹ ಹೊಂದಿರತಕ್ಕುದು.

**10. ಘೋಷಣೆಯ ನಮೂನೆಗಳು:-** ಒಡೆಯನು ಒತ್ತೆಯನ್ನು ಕ್ಲೇಮು ಮಾಡಿದಲ್ಲಿ ಘೋಷಣೆಯು "ಸಿ" ನಮೂನೆಯಲ್ಲಿ ಇರತಕ್ಕುದು ಮತ್ತು ಕಳೆದು ಹೋದ ಗಿರವಿ ಚೀಟಿಯ ಘೋಷಣೆಯು "ಡಿ" ನಮೂನೆಯಲ್ಲಿರತಕ್ಕುದು.

**11. ಒತ್ತೆ ಪುಸ್ತಕ:-** ಗಿರವಿದಾರರು "ಇ" ನಮೂನೆಯಲ್ಲಿ ಒತ್ತೆ ಪುಸ್ತಕವನ್ನು ಇಡತಕ್ಕುದು.

**12. ಗಿರವಿ ಚೀಟಿ, ಒತ್ತೆಗಳ ಮಾರಾಟದ ಪುಸ್ತಕ ಮತ್ತು ಒತ್ತೆಯನ್ನು ಬಿಡಿಸಿಕೊಂಡ ರಸೀದಿ:-** ಗಿರವಿ ಚೀಟಿ, ಒತ್ತೆಗಳ ಮಾರಾಟದ ಪುಸ್ತಕ ಮತ್ತು ಒತ್ತೆಯನ್ನು ಬಿಡಿಸಿಕೊಂಡ ರಸೀದಿ, ಇವು ಅನುಕ್ರಮವಾಗಿ 'ಎಫ್', 'ಜಿ' ಮತ್ತು 'ಎಚ್' ನಮೂನೆಗಳಲ್ಲಿರತಕ್ಕುದು.

**13. ಗಿರವಿದಾರರಿಗೆ ಅನುಮತಿಸಲಾದ ವೆಚ್ಚಗಳು:-** (1) ಈ ಕೆಳಕಂಡ ಸಂದರ್ಭಗಳ ಸಂಬಂಧದಲ್ಲಿ ಗಿರವಿದಾರನು ಗಿರವಿ ಇಟ್ಟವನಿಂದ ತಗಾದೆ ಮಾಡಬಹುದಾದ ಮತ್ತು ತೆಗೆದುಕೊಳ್ಳಬಹುದಾದಂಥ ಚಾರ್ಜುಗಳು, ಈ ಕೆಳಗೆ ಸೂಚಿಸಿರುವಂತೆ ಇರತಕ್ಕುದು, ಎಂದರೆ:-

(ಎ) 10ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ (ii)ನೇ ಉಪಖಂಡದಲ್ಲಿ ಉಲ್ಲೇಖಿಸಿದ ಒತ್ತೆಗಳ ಮಾರಾಟ ಪುಸ್ತಕದಲ್ಲಿ ಮಾರಾಟದ ನಮೂದನ್ನು ಪರಿಶೀಲಿಸುವುದಕ್ಕಾಗಿ ಆರು ಪೈಸೆ.

(ಬಿ) 10ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದ ಮೇರೆಗೆ ಗಿರವಿದಾರನು ಒದಗಿಸಿದ ಲೆಕ್ಕಪತ್ರಗಳ ವಿವರಪತ್ರಕ್ಕಾಗಿ:-

| | | |
|---|---|---|
| | | ರೂ.ಪೈ. |
| 1. | ಸಾಲದ ಮೊಬಲಗು 50 ರೂ.ಗಳನ್ನು ಮೀರದಿದ್ದರೆ. | 0-60 |
| 2. | ಸಾಲದ ಮೊಬಲಗು 50 ರೂ.ಗಳನ್ನು ಮೀರಿದ್ದು ಆದರೆ 100 ರೂ.ಗಳಿಗಿಂತ ಕಡಿಮೆ ಇದ್ದರೆ. | 0-12 |
| 3. | ಸಾಲದ ಮೊಬಲಗು 100 ರೂ.ಗಳನ್ನು ಮೀರಿದ್ದು ಆದರೆ 300 ರೂ.ಗಳಿಗಿಂತ ಕಡಿಮೆ ಇದ್ದರೆ. | 0-19 |
| 4. | ಸಾಲದ ಮೊಬಲಗು 300 ರೂ.ಗಳನ್ನು ಮೀರಿದ್ದು ಆದರೆ 500 ರೂ.ಗಳಿಗಿಂತ ಕಡಿಮೆ ಇದ್ದರೆ. | 0-25 |
| 5. | -ಅದೇ- -ಅದೇ- 500 ರೂ.ಗಳು | 0-37 |
| | -ಅದೇ- -ಅದೇ- 1,000ರೂ.ಗಳು. | |
| 6. | -ಅದೇ -ಅದೇ- 1,000 ರೂ.ಗಳು. | 0-50 |

(2) ಪ್ರತಿಯೊಂದು ಸಾಲ ಮತ್ತು ಪ್ರತಿಯೊಂದು ಕೋರಿಕೆಯ ಸಂಬಂಧದಲ್ಲಿ ಪ್ರತ್ಯೇಕ ಫೀಜನ್ನು ವಿಧಿಸಬಹುದು.

(3) (1)ನೇ ಉಪನಿಯಮದ ಮೇರೆಗೆ ವಿಧಿಸಿದ ಚಾರ್ಜುಗಳನ್ನು, ಸಾಲದಲ್ಲಿಯೇ ಅವುಗಳನ್ನು ಸೇರಿಸಲಾಗಿದ್ದರೆ ಹೇಗೋ ಹಾಗೆ ಗಿರವಿದಾರನು ವಸೂಲು ಮಾಡಬಹುದು. ಆದರೆ, ಅಂಥ ಚಾರ್ಜುಗಳ ಮೇಲೆ ಬಡ್ಡಿಯನ್ನು ವಿಧಿಸತಕ್ಕುದಲ್ಲ.

(4) ಒತ್ತೆಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟದ ಮೂಲಕ ವಾಸ್ತವವಾಗಿ ವಿಲೆ ಮಾಡುವುದಕ್ಕೆ ಮುಂಚೆ ಗಿರವಿ ಇಟ್ಟವನು ಒತ್ತೆಯನ್ನು ಬಿಡಿಸಿಕೊಂಡಲ್ಲಿ, ಗಿರವಿದಾರನು ಅವನಿಂದ ಆ ಒತ್ತೆಯನ್ನು ಹರಾಜಿಗೆ ತರುವಲ್ಲಿ ಅವನು ವಹಿಸಿದ ವೆಚ್ಚಗಳು ಯಾವುದಾದರೂ ಇದ್ದರೆ, ಅವುಗಳನ್ನು ತಗಾದೆ ಮಾಡಬಹುದು ಮತ್ತು ತೆಗೆದುಕೊಳ್ಳಬಹುದು.

**14. ಲೆಕ್ಕದ ಪ್ರತಿಯನ್ನು ಪ್ರಮಾಣೀಕರಿಸುವುದು:-** ಗಿರವಿದಾರನು ಇಟ್ಟಿರುವ ಆ ಯಾವುದೇ ಲೆಕ್ಕದ ಪ್ರತಿಯು, ಗಿರವಿದಾರನ ಅಥವಾ ಅವನ ಏಜೆಂಟನ ಪ್ರಮಾಣಪತ್ರವು ಅದರ ಅಡಿಯಲ್ಲಿ ಇದ್ದ ಹೊರತು, ಸಾಕ್ಷ್ಯದಲ್ಲಿ ಅಂಗೀಕಾರಾರ್ಹವಾಗತಕ್ಕುದಲ್ಲ. ಪ್ರಮಾಣಪತ್ರವು "ಐ" ನಮೂನೆಯಲ್ಲಿರತಕ್ಕುದು.

**15. ದಾಖಲೆಗಳು, ಮುಂತಾದವುಗಳನ್ನು ಇಡಬೇಕಾದ ಭಾಷೆ:-** 10ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಎಲ್ಲಾ ದಾಖಲೆಗಳು ಅಥವಾ ಪುಸ್ತಕ, ಲೆಕ್ಕಪತ್ರಗಳು ಮತ್ತು ದಸ್ತಾವೇಜುಗಳಲ್ಲಿ ಮಾಡಿದ ನಮೂದುಗಳು ಒಂದು ವರ್ಷದ ತರುವಾಯದ ಪುನರವಲೋಕನಕ್ಕೆ ಒಳಪಟ್ಟು, ಈ ಕೆಳಗಿನ ಕೋಷ್ಟಕದ (2)ನೇ ಅಂಕಣದಲ್ಲಿ ನಮೂದಿಸಲಾದ ಪ್ರದೇಶದೊಳಗೆ ಇಂಗ್ಲೀಷಿನಲ್ಲಿಯೇ ಆಗಲಿ ಅಥವಾ ಹಿಂದಿಯಲ್ಲಿಯೇ ಆಗಲಿ ಅಥವಾ ಅದರ (3) ನೇ ಅಂಕಣದಲ್ಲಿನ ಸಂವಾದಿ ನಮೂದಿನಲ್ಲಿ ತಿಳಿಸಿರುವ ಭಾಷೆಯಲ್ಲಿ ಅಥವಾ ಭಾಷೆಗಳಲ್ಲಿ ಇರತಕ್ಕುದು.

**ಕೋಷ್ಟಕ**

| ಕ್ರಮ ಸಂಖ್ಯೆ | ಪ್ರದೇಶ | ಭಾಷೆ ಅಥವಾ ಭಾಷೆಗಳು |
|---|---|---|
| 1. | ಬೆಂಗಳೂರು ನಗರ. | ಕನ್ನಡ. |
| 2. | ಬೆಂಗಳೂರು, ಮಂಡ್ಯ, ಮೈಸೂರು. | |
| 3. | ಹಾಸನ, ಕೊಡಗು, ದಕ್ಷಿಣ ಕನ್ನಡ. | |
| 4. | ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು. | |
| 5. | ಚಿತ್ರದುರ್ಗ, ಧಾರವಾಡ. | |
| 6. | ಬಿಜಾಪುರ. | |
| 7. | ಕೋಲಾರ. | |
| 8. | ಬಳ್ಳಾರಿ. | |
| 9. | ಕಾರವಾರ ಮತ್ತು ಬೆಳಗಾವಿ. | |
| 10. | ರಾಯಚೂರು, ಗುಲ್ಬರ್ಗಾ ಮತ್ತು ಬೀದರ್. | |

**16. ಲೆಕ್ಕದ ವಿವರ ಪತ್ರವನ್ನು ಒದಗಿಸಬೇಕಾದ ರೀತಿ:-** 10ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದಲ್ಲಿ ಉಲ್ಲೇಖಿಸಿದ ಲೆಕ್ಕಗಳ ವಿವರಪತ್ರವನ್ನು, ಗಿರವಿ ಇಟ್ಟವನಿಗೆ, ಗಿರವಿ ಇಟ್ಟವನು ಕೊಟ್ಟಿರುವ ಕೋರಿಕೆಯಲ್ಲಿ ತಿಳಿಸಿರುವ ವಿಳಾಸಕ್ಕೆ ನೋಂದಾಯಿತ ಅಂಚೆಯ ಮೂಲಕ ತಲುಪೊಪ್ಪಿಗೆ ಸಹಿತ ಕಳುಹಿಸತಕ್ಕುದು:

ಪರಂತು, ಗಿರವಿ ಇಟ್ಟವನು, ವಿವರ ಪತ್ರವನ್ನು ಖುದ್ದಾಗಿ ತೆಗೆದುಕೊಳ್ಳಲು ಬರಹದಲ್ಲಿ ಒಪ್ಪಿಕೊಂಡಿದ್ದರೆ, ಅದನ್ನು ನೋಂದಾಯಿತ ಅಂಚೆಯ ಮೂಲಕ ಕಳುಹಿಸುವುದು ಅವಶ್ಯಕವಾಗಿರತಕ್ಕುದಲ್ಲ.

(2) ಗಿರವಿ ಇಟ್ಟವನು ಲೆಕ್ಕದ ವಿವರಪತ್ರವನ್ನು ಖುದ್ದಾಗಿ ತೆಗೆದುಕೊಂಡಲ್ಲಿ, ಅವನು ಅದರ ಸ್ವೀಕೃತಿ ಪತ್ರವನ್ನು ಬರವಣಿಗೆಯಲ್ಲಿ ಕೊಡತಕ್ಕುದು. ಗಿರವಿ ಇಟ್ಟವನು ಸ್ವೀಕೃತಿ ಪತ್ರಕ್ಕೆ ರುಜು ಹಾಕತಕ್ಕುದು ಅಥವಾ ಅವನು ಅನಕ್ಷರಸ್ಥನಾಗಿದ್ದರೆ ಅದಕ್ಕೆ ಅವನ ಹೆಬ್ಬೆರಳಿನ ಗುರುತನ್ನು ಹಾಕತಕ್ಕುದು.

(3) ಲೆಕ್ಕದ ವಿವರ ಪತ್ರವನ್ನು ನೋಂದಾಯಿತ ಅಂಚೆಯ ಮೂಲಕ ಕಳುಹಿಸಿದ್ದರೆ, ಅಂಚೆಯ ರಸೀತಿ ಮತ್ತು ತಲುಪೊಪ್ಪಿಗೆಯ ಹಾಜರುಪಡಿಸುವಿಕೆಯು ಅಂಥ ವಿವರಪತ್ರವನ್ನು ಕಳುಹಿಸಿರುವ ಬಗ್ಗೆ ಸಾಕಷ್ಟು ರುಜುವಾತಾಗಿರತಕ್ಕುದು.

(4) ನೋಂದಾಯಿತ ಅಂಚೆಯ ಮೂಲಕ ವಿವರ ಪತ್ರವನ್ನು ಕಳುಹಿಸುವುದಕ್ಕಾಗಿನ ವೆಚ್ಚಗಳನ್ನು, ಲೆಕ್ಕಪತ್ರಗಳಲ್ಲಿ ನಮೂದಿಸತಕ್ಕುದು ಮತ್ತು ಅವುಗಳು ಸಾಲದ ಮೊಬಲಗಿನೊಂದಿಗೆ ಗಿರವಿದಾರನಿಂದ ವಸೂಲೀಯವಾಗತಕ್ಕುದು. ಆದರೆ ಅಂಥ ವೆಚ್ಚಗಳ ಮೇಲೆ ಯಾವುದೇ ಬಡ್ಡಿಯನ್ನು ವಿಧಿಸತಕ್ಕುದಲ್ಲ.

**17. ಕೆಲವು ಸಂದರ್ಭಗಳಲ್ಲಿ ಕ್ಲೇಮಿನ ಬಗ್ಗೆ ಸಾರ್ವಜನಿಕ ನೋಟೀಸು:-** 9ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದ ಪರಂತುಕದಲ್ಲಿ ಉಲ್ಲೇಖಿಸಿದ ಸಾರ್ವಜನಿಕ ನೋಟೀಸು ಈ ಕೆಳಕಂಡ ವಿವರಗಳನ್ನು ಒಳಗೊಂಡಿರತಕ್ಕುದು, ಎಂದರೆ:-

(ಎ) ಸಂಬಂಧಪಟ್ಟ ಗಿರವಿದಾರನ ಹೆಸರು, ವ್ಯವಹಾರದ ಸ್ಥಳ ಮತ್ತು ಲೈಸೆನ್ಸಿನ ಸಂಖ್ಯೆ;

(ಬಿ) ವಸ್ತುವಿನ ಪೂರ್ಣ ಮತ್ತು ವಿವರವಾದ ವಿವರಣೆ (ಆಭರಣಗಳ ಸಂದರ್ಭದಲ್ಲಿ ತೂಕವನ್ನು ನಮೂದಿಸಬೇಕು);

(ಸಿ) ಗಿರವಿ ಇಟ್ಟವನ ಹೆಸರು ಮತ್ತು ವಿಳಾಸ; ಮತ್ತು

(ಡಿ) ಅರ್ಜಿದಾರನು, ಅವನ ಕ್ಲೇಮನ್ನು ಯಾವ ಆಧಾರದ ಮೇಲೆ ಮಾಡುವನೋ ಆ ಆಧಾರ ಎಂದರೆ, ಒತ್ತೆಯ ಒಡೆಯ ಆದರೆ, ಗಿರವಿ ಚೀಟಿಯನ್ನು ಹೊಂದಿಲ್ಲದ ಅಥವಾ ಗಿರವಿ ಚೀಟಿಯನ್ನು ಹೊಂದಲು ಹಕ್ಕುಳ್ಳವನಾಗಿರುವನೆಂದು ಕ್ಲೇಮು ಮಾಡುವ ಆದರೆ, ಅದು ಕಳೆದುಹೋಗಿದೆ, ಕೈಮರೆತು ಹೋಗಿದೆ, ಹಾಳಾಗಿದೆ, ಕಳುವಾಗಿದೆ ಅಥವಾ ಅವನಿಂದ ಮೋಸದಿಂದ ಪಡೆದುಕೊಳ್ಳಲಾಗಿದೆ ಎಂದು ಆಪಾದಿಸುವ ವ್ಯಕ್ತಿ.

(2) (1)ನೇ ಉಪನಿಯಮದ ಮೇರೆಗಿನ ನೋಟೀಸನ್ನು ಗಿರವಿದಾರನು ಅವನ ವ್ಯವಹಾರವನ್ನು ನಡೆಸಿಕೊಂಡು ಹೋಗುತ್ತಿರುವಂಥ ಮತ್ತು ಲೈಸೆನ್ಸ್ ಕೊಡುವ ಪ್ರಾಧಿಕಾರಿಯು, ಅಥವಾ ಲೇವಾದೇವಿಗಾರರ ಮತ್ತು ಗಿರವಿದಾರರ ಇನ್‌ಸ್ಪೆಕ್ಟರ್ ಅನುಮೋದಿಸಿರುವಂಥ ಸ್ಥಳದಲ್ಲಿ ಪ್ರಸಾರದಲ್ಲಿರುವ ಸುದ್ದಿ ಪತ್ರಿಕೆಯಲ್ಲಿ ನಿರಂತರವಾಗಿ ಎರಡು ದಿನಗಳು, ಅರ್ಜಿಯನ್ನು ಸಲ್ಲಿಸುವ ಇಪ್ಪತ್ತೊಂದು ದಿವಸಗಳಿಗೆ ಮುಂಚೆ ಪ್ರಕಟಿಸತಕ್ಕುದು.

**18. 9(1)(ಬಿ) ಪ್ರಕರಣದ (1)ನೇ ಪರಂತುಕದ ಉದ್ದೇಶಕ್ಕಾಗಿ ನಿಯಮಿಸಿದ ಪ್ರಾಧಿಕಾರಿ:-** 9ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ (1)ನೇ ಪರಂತುಕದ ಉದ್ದೇಶಗಳಿಗಾಗಿನ ಪ್ರಾಧಿಕಾರಿಯು, ಗಿರವಿದಾರನು ಅವನು ವ್ಯವಹಾರ ಸ್ಥಳವನ್ನು ಹೊಂದಿರುವ ತಾಲ್ಲೂಕಿನ ತಹಸೀಲ್ದಾರನು ಅಥವಾ ತಹಸೀಲ್ದಾರನ ಪ್ರಭಾರವನ್ನು ಸ್ವತಂತ್ರವಾಗಿ ಉಪತಹಸೀಲ್ದಾರನು ಧಾರಣ ಮಾಡಿರುವಲ್ಲಿ ಅಂಥ ಉಪತಹಸೀಲ್ದಾರನು ಆಗಿರತಕ್ಕುದು.

**19. ಗಿರವಿದಾರನಿಗೆ ಘೋಷಣೆಯನ್ನು ಕೊಡಬೇಕಾದ ಅವಧಿ:-** 9ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ (ii)ನೇ ಪರಂತುಕದಲ್ಲಿ ಉಲ್ಲೇಖಿಸಿದಂಥ ಘೋಷಣೆಯನ್ನು ಗಿರವಿದಾರನಿಗೆ ವಾಪಸು ಮಾಡಬೇಕಾದ ಅವಧಿಯು, ಅರ್ಜಿದಾರನಿಗೆ ಘೋಷಣೆಯ ನಮೂನೆಯನ್ನು ವಾಪಸು ಮಾಡಬೇಕಾದ ಅವಧಿಯು, ಅರ್ಜಿದಾರನಿಗೆ ಘೋಷಣೆಯ ನಮೂನೆಯನ್ನು ಕೊಟ್ಟ ತರುವಾಯ ಹದಿನೈದು ದಿವಸಗಳಾಗಿರತಕ್ಕುದು.

**20. ಒತ್ತೆಗಳನ್ನು ಹರಾಜು ಹಾಕುವ ಪ್ರಕ್ರಿಯೆ:-** ಒತ್ತೆಗಳನ್ನು ಬಹಿರಂಗ ಹರಾಜಿನ ಮೂಲಕ ಮಾರಾಟಕ್ಕಾಗಿನ ಪ್ರಕ್ರಿಯೆಯು ಈ ಕೆಳಕಂಡಂತಿರತಕ್ಕುದು:-

(1) ಮಾರಾಟವನ್ನು, ಲೈಸೆನ್ಸ್ ಕೊಡುವ ಪ್ರಾಧಿಕಾರಿಯಿಂದ ಅಥವಾ ಲೇವಾದೇವಿದಾರರ ಮತ್ತು ಗಿರವಿದಾರರ ಇನ್‌ಸ್ಪೆಕ್ಟರ್‌ನಿಂದ ಅನುಮೋದಿತನಾದ ಹರಾಜುದಾರನ ಮೂಲಕ ನಡೆಸತಕ್ಕುದು.

(2) ಹರಾಜುದಾರನು:-

(i) ಎಲ್ಲಾ ಒತ್ತೆಗಳನ್ನು ಸಾರ್ವಜನಿಕರ ದೃಷ್ಟಿಗೆ ಕಾಣುವಂತೆ ಇಡತಕ್ಕುದು;

(ii) ಈ ಕೆಳಕಂಡ ವಿವರಣೆಗಳನ್ನು ಒಳಗೊಂಡ, ಹರಾಜಿನಲ್ಲಿ ಮಾರಾಟ ಮಾಡಬೇಕಾದ ಒತ್ತೆಗಳ ಒಂದು ಸೂಚಿ ಪಟ್ಟಿಯನ್ನು ಮುದ್ರಣ ಮಾಡತಕ್ಕುದು:-

(ಎ) ಸಂಬಂಧಪಟ್ಟ ಗಿರವಿದಾರನ ಹೆಸರು, ವ್ಯವಹಾರದ ಸ್ಥಳ ಮತ್ತು ಲೈಸೆನ್ಸಿನ ಸಂಖ್ಯೆ;

(ಬಿ) ಸಾಲದ ದಿನಾಂಕ;

(ಸಿ) ಒತ್ತೆಯ ಪುಸ್ತಕದಲ್ಲಿ ಒತ್ತೆಯ ಸಂಖ್ಯೆ;

(ಡಿ) ವಸ್ತುವಿನ ಪೂರ್ಣ ಮತ್ತು ವಿವರವಾದ ವಿವರಣೆ (ಆಭರಣಗಳ ಸಂದರ್ಭದಲ್ಲಿ ತೂಕವನ್ನು ಸೂಚಿಸಬೇಕು);

(ಇ) ಗಿರವಿ ಇಟ್ಟವನ ಹೆಸರು ಮತ್ತು ವಿಳಾಸ; ಮತ್ತು

(ಎಫ್) ಮಾರಾಟದ ದಿನಾಂಕ, ವೇಳೆ ಮತ್ತು ಸ್ಥಳ;

(iii) ಗಿರವಿದಾರನ ವ್ಯವಹಾರದ ಸ್ಥಳದಲ್ಲಿ ಅದರ ಒಂದು ಪ್ರತಿಯನ್ನು ಅಂಟಿಸುವ ಮೂಲಕ ಮತ್ತು ಉದ್ದೇಶಿತ ಸವಾಲುದಾರರಿಗೆ ಪ್ರತಿಗಳನ್ನು ಹಂಚುವ ಮೂಲಕ ಮುದ್ರಿತ ಸೂಚಿಪಟ್ಟಿಯನ್ನು ಪ್ರಕಟಿಸತಕ್ಕುದು;

[1][(iv) (ಎ) ಮಾರಾಟಕ್ಕೆ ನಿಗದಿಪಡಿಸಿದ ದಿನಾಂಕಕ್ಕೆ ಮುಂಚೆ ಕನಿಷ್ಠ ಪಕ್ಷ ಒಂದುವಾರಕ್ಕೆ ಮೊದಲು, ಸೂಚಿಪಟ್ಟಿಯ ಎರಡು ಪ್ರತಿಗಳನ್ನು, ಯಾವ ಆವರಣದಲ್ಲಿ ಹರಾಜನ್ನು ನಡೆಸಬೇಕಾಗಿದೆಯೋ ಆ ಆವರಣದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಪೊಲೀಸ್ ಸ್ಟೇಷನ್‌ಗೆ, ಅದರ ನೋಟೀಸು ಬೋರ್ಡಿನ ಮೇಲೆ ಅಂಟಿಸುವುದಕ್ಕೆ ಒಂದು ಪ್ರತಿಯನ್ನು ಮತ್ತು ದಾಖಲೆಗಾಗಿ ಮತ್ತೊಂದು ಪ್ರತಿಯನ್ನು ಕಳುಹಿಸತಕ್ಕುದು;][1]

1. ಸಂಖ್ಯೆ ಜಿಎಸ್‌ಆರ್ 347, ಅಧಿಸೂಚನೆ ಸಂಖ್ಯೆ ಡಿಪಿಸಿ 62 ಸಿಸಿಸಿ 69 ದಿನಾಂಕ 17-9-1969ರ ಮೂಲಕ 9-10-1969ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಎಎ) ಮಾರಾಟಕ್ಕಾಗಿ ನಿಗದಿಪಡಿಸಿದ ದಿನಾಂಕಕ್ಕೆ ಮುಂಚೆ ಕನಿಷ್ಠ ಪಕ್ಷ ಒಂದು ವಾರಕ್ಕೆ ಮೊದಲು ಮುದ್ರಿತ ಸೂಚಿಪಟ್ಟಿಯ ಎರಡು ಪ್ರತಿಗಳನ್ನು, ಯಾವ ಆವರಣದಲ್ಲಿ ಹರಾಜನ್ನು ನಡೆಸಬೇಕಾಗಿದೆಯೋ ಆ ಆವರಣದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಲೈಸೆನ್ಸು ಕೊಡುವ ಪ್ರಾಧಿಕಾರಿಗೆ ಅವನ ಕಛೇರಿಯ ನೋಟೀಸು ಬೋರ್ಡಿನ ಮೇಲೆ ಅಂಟಿಸುವುದಕ್ಕಾಗಿ ಒಂದು ಪ್ರತಿಯನ್ನು ಮತ್ತು ದಾಖಲೆಗಾಗಿ ಮತ್ತೊಂದು ಪ್ರತಿಯನ್ನು ಕಳುಹಿಸತಕ್ಕುದು;

(ಬಿ) ಮುದ್ರಿತ ಸೂಚಿಪಟ್ಟಿಯ ಒಂದು ಪ್ರತಿಯನ್ನು, ಸಂಬಂಧಪಟ್ಟ ಗಿರುವಿದಾರನು ವ್ಯವಹಾರವನ್ನು ನಡೆಸುತ್ತಿರುವ ಸ್ಥಳದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಪೊಲೀಸ್ ಸ್ಟೇಷನ್‌ಗೆ ಅಥವಾ ಪ್ರತಿಯೊಂದು ಪೊಲೀಸ್ ಸ್ಟೇಷನ್‌ಗಳಿಗೆ ದಾಖಲೆಗಾಗಿ ಕಳುಹಿಸತಕ್ಕುದು; ಮತ್ತು

(ಸಿ) ಯಾವುದೇ ಸಂದರ್ಭದಲ್ಲಿ, ಸಂಬಂಧಪಟ್ಟ ಗಿರವಿದಾರನು ವ್ಯವಹಾರವನ್ನು ನಡೆಸುವ ಸ್ಥಳಗಳ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಪ್ರತಿಯೊಂದು ಪೊಲೀಸ್ ಸ್ಟೇಷನ್‌ಅನ್ನು ಮತ್ತು ಮಾರಾಟದ ಸ್ಥಳವನ್ನು ಅಥವಾ ಸ್ಥಳಗಳನ್ನು ಮತ್ತು ಅಂಥ ಹರಾಜಿನ ಮುಂದೂಡಿಕೆ ಮತ್ತು ಹರಾಜಿನ ಎಲ್ಲ ತರುವಾಯದ ದಿನಾಂಕಗಳನ್ನು ಸೂಚಿಸತಕ್ಕುದು;][1]

(v) ಮುದ್ರಿತ ಸೂಚಿಪಟ್ಟಿಯ ಒಂದು ಪ್ರತಿಯನ್ನು ಮಾರಾಟಕ್ಕಾಗಿ ನಿಗದಿಪಡಿಸಿದ ದಿನಾಂಕಕ್ಕೆ ಕನಿಷ್ಠ ಪಕ್ಷ ಒಂದು ವಾರಕ್ಕೆ ಮುಂಚೆ ಗಿರವಿ ಇಟ್ಟವನಿಗೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸತಕ್ಕುದು.

(3) ಸೂಚಿಪಟ್ಟಿಯಲ್ಲಿನ ಪ್ರತಿಯೊಬ್ಬ ಗಿರವಿದಾರನ ಒತ್ತೆಗಳು, ಲೈಸೆನ್ಸು ಕೊಡುವ ಪ್ರಾಧಿಕಾರಿಯು ಅಥವಾ ಲೇವಾದೇವಿದಾರರ ಮತ್ತು ಗಿರವಿದಾರರ ಇನ್‌ಸ್ಪೆಕ್ಟರ್ ಅನುಮೋದಿಸಿದ ಸುದ್ದಿಪತ್ರಿಕೆಯಲ್ಲಿ ಆ ಮಾರಾಟವನ್ನು ಅಧಿಸೂಚಿಸುವ ಯಾರೇ ಇತರ ಗಿರವಿದಾರನ ಒತ್ತೆಗಳಿಂದ, ಈ ಕೆಳಕಂಡ ವಿವರಗಳನ್ನು ಸಹ ಒದಗಿಸಿ ಪ್ರತ್ಯೇಕವಾಗಿಡತಕ್ಕುದು:-

(ಎ) ಗಿರವಿದಾರನ ಹೆಸರು ಮತ್ತು ಅವನ ವ್ಯವಹಾರದ ಸ್ಥಳ; ಮತ್ತು

(ಬಿ) ಒತ್ತೆಗಳನ್ನು ಗಿರವಿ ಇಟ್ಟಂಥ ತಿಂಗಳುಗಳು.

(4) ಗಿರವಿದಾರನು ಸ್ವತಃ ಸವಾಲನ್ನು ಕೂಗಿದಲ್ಲಿ, ಹರಾಜುದಾರನು, ಇತರ ವ್ಯಕ್ತಿಗಳು ಸವಾಲನ್ನು ಕೂಗುವ ಪ್ರಮಾಣದಲ್ಲೇ ಯಾವ ರೀತಿಯಲ್ಲಿ ಅವನು ಸವಾಲನ್ನು ಒಪ್ಪಿಕೊಳ್ಳಬೇಕೋ ಅದನ್ನು ಬಿಟ್ಟು ಇತರ ರೀತಿಯಲ್ಲಿ ಸವಾಲನ್ನು ಒಪ್ಪಿಕೊಳ್ಳತಕ್ಕುದಲ್ಲ ಮತ್ತು ಹರಾಜುದಾರನು ಯಾವುದೇ ವಸ್ತು ಸವಾಲಿನಲ್ಲಿ ಗಿರವಿದಾರನ ಹೆಸರಿಗೆ ನಿಂತ ತತ್‌ಕ್ಷಣವೇ ಗಿರವಿದಾರನೇ ಖರೀದಿದಾರನೆಂದು ಎಲ್ಲರಿಗೂ ಕೇಳುವಂತೆ ಘೋಷಿಸತಕ್ಕುದು.

(5) ಹರಾಜುದಾರನು, ಮಾರಾಟದ ತರುವಾಯ ಹದಿನಾಲ್ಕು ದಿವಸಗಳೊಳಗೆ, ಗಿರವಿದಾರನಿಗೆ ಆ ಸೂಚಿಪಟ್ಟಿಯ ಅಥವಾ ಆ ಗಿರವಿದಾರನ ಒತ್ತೆಗಳಿಗೆ ಅದು ಸಂಬಂಧಪಡುವಷ್ಟರ ಮಟ್ಟಿಗೆ ಪ್ರತಿಯೊಂದು ವಸ್ತುವಿನ ಮಾರಾಟಕ್ಕಾಗಿನ ವೆಚ್ಚಗಳನ್ನು ಸಹ ಸೂಚಿಸಿ ಅಧಿಪ್ರಮಾಣಿತ ಪ್ರತಿಯನ್ನು ಕೊಡತಕ್ಕುದು.

(6) ಗಿರವಿದಾರನು, ಹರಾಜಿನ ತರುವಾಯ ಕನಿಷ್ಠ ಪಕ್ಷ ಮೂರು ವರ್ಷಗಳವರೆಗೆ ಪ್ರತಿಯೊಂದು ಅಂಥ ಸೂಚಿಪಟ್ಟಿಯನ್ನು ಸಂರಕ್ಷಿಸಿಡತಕ್ಕುದು.

1. ಸಂಖ್ಯೆ ಜಿಎಸ್‌ಆರ್ 66, ಅಧಿಸೂಚನೆ ಸಂಖ್ಯೆ ಡಿಪಿಸಿ 248 ಸಿಸಿಸಿ 69, ದಿನಾಂಕ 25-2-1971ರ ಮೂಲಕ 25-2-1971ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ನಮೂನೆ 'ಎ'**
**(3ನೇ ನಿಯಮವನ್ನು ನೋಡಿ).**
**ಗಿರವಿದಾರನ ಲೈಸೆನ್ಸ್‌ಗಾಗಿ ಅರ್ಜಿಯ ನಮೂನೆ.**

ಗೆ,

ಲೇವಾದೇವಿದಾರರ ಸಹಾಯಕ ರಿಜಿಸ್ಟ್ರಾರ್.

1. ಅರ್ಜಿದಾರನ ಹೆಸರು (ಪೂರ್ಣವಾಗಿ).
2. ಪೂರ್ಣ ವಿಳಾಸ (ಯಾವುದೇ ತರುವಾಯದ ಬದಲಾವಣೆಯನ್ನು ತಿಳಿಸತಕ್ಕದ್ದು).
3. ತಂದೆಯ ಹೆಸರು.
4. ಅರ್ಜಿದಾರನು ಹೊಂದಿರುವ ಸ್ವತ್ತುಗಳ ಪಟ್ಟಿ.
5. ಯಾವುದಕ್ಕೆ ಸಂಬಂಧಿಸಿದಂತೆ ಲೈಸೆನ್ಸಿಗಾಗಿ ಅರ್ಜಿಯನ್ನು ಹಾಕಿ ಕೊಳ್ಳಲಾಗಿದೆಯೋ ಆ ಅಂಗಡಿಯ ಅಥವಾ ವ್ಯವಹಾರದ ಸ್ಥಳದ ವಿಳಾಸ.
6. ಅರ್ಜಿದಾರನು, ಒಂದಕ್ಕಿಂತ ಹೆಚ್ಚಿನ ಅಂಗಡಿಯನ್ನು ಅಥವಾ ವ್ಯವಹಾರದ ಸ್ಥಳವನ್ನು ಹೊಂದಿದ್ದರೆ, ಪ್ರತಿಯೊಂದು ಅಂಥ ಅಂಗಡಿಯ ಅಥವಾ ವ್ಯವಹಾರದ ಸ್ಥಳದ ವಿಳಾಸವನ್ನು ನಮೂದಿಸತಕ್ಕದ್ದು.
7. 6ನೇ ಬಾಬಿನ ಬಗ್ಗೆ ನಮೂದಿಸಿರುವ ಪ್ರತಿಯೊಂದು ಅಂಗಡಿಗೆ ಅಥವಾ ವ್ಯವಹಾರದ ಸ್ಥಳಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಲೈಸೆನ್ಸಿಗಾಗಿ ಅರ್ಜಿದಾರನು ಅರ್ಜಿಯನ್ನು ಸಲ್ಲಿಸಿದ್ದಾನೆಯೇ? ಹಾಗಿದ್ದರೆ, ಲೈಸೆನ್ಸ್ ಮಂಜೂರಾಗಿದೆಯೇ ಇಲ್ಲವೇ?
8. ಸದ್ಯದ ಅರ್ಜಿಯನ್ನು ಹೊಸ ಲೈಸೆನ್ಸಿನ ಮಂಜೂರಾತಿಗಾಗಿ ಅಥವಾ ಹಿಂದಿನ ವರ್ಷದಲ್ಲಿ ಮಂಜೂರು ಮಾಡಲಾದ ಲೈಸೆನ್ಸಿನ ನವೀಕರಣಕ್ಕಾಗಿ ಸಲ್ಲಿಸಲಾಗಿದೆಯೇ?
9. ಯಾವ ಹಣಕಾಸು ವರ್ಷಕ್ಕಾಗಿ ಲೈಸೆನ್ಸಿಗೆ ಅರ್ಜಿ ಸಲ್ಲಿಸಲಾಗಿದೆಯೋ ಆ ಹಣಕಾಸು ವರ್ಷ.
10. ಅರ್ಜಿದಾರನು, ಲೈಸೆನ್ಸಿಗಾಗಿ ನಿಯಮಿಸಲಾದ ಫೀಜನ್ನು ಸಂದಾಯ ಮಾಡಿದ್ದಾನೆಯೇ?
(ಖಜಾನೆ ರಸೀತಿಯನ್ನು ಲಗತ್ತಿಸತಕ್ಕದ್ದು)

ಅರ್ಜಿದಾರನ ರುಜು.

ಮೇಲೆ ಒದಗಿಸಿದ ವಿವರಗಳು, ನಾನು ತಿಳಿದಿರುವ ಮತ್ತು ನಂಬಿರುವ ಮಟ್ಟಿಗೆ ಸರಿಯಾಗಿವೆ ಎಂದು ನಾನು ಘೋಷಿಸುತ್ತೇನೆ.

ಅರ್ಜಿದಾರನ ರುಜು.

**ನಮೂನೆ "ಬಿ"**

**(5ನೇ ನಿಯಮವನ್ನು ನೋಡಿ)**

ಕರ್ನಾಟಕ ಗಿರವಿದಾರರ ಅಧಿನಿಯಮ, 1961ರ ಮೇರೆಗೆ ನಿಯಮಿಸಲಾದ ಲೈಸೆನ್ಸು ಕೊಡುವ ಪ್ರಾಧಿಕಾರಿಯಾಗಿರುವ, ಲೇವಾದೇವಿದಾರರ ರಿಜಿಸ್ಟ್ರಾರನಾದ ನಾನು----ದ---ಇಲ್ಲಿ ಈಗ ವಾಸಿಸುತ್ತಿರುವ ಶ್ರೀ----------ಅವರಿಗೆ -------ಜಿಲ್ಲೆಯಲ್ಲಿ-----ಸಂಖ್ಯೆಯ ಆವರಣದಲ್ಲಿ ಗಿರವಿದಾರನ ವ್ಯವಹಾರವನ್ನು ನಡೆಸಲು----ದಿಂದ 31ನೇ ಮಾರ್ಚ್‌ವರೆಗೆ ಈ ಕೆಳಗೆ ನಮೂದಿಸಿದ ಷರತ್ತುಗಳ ಮೇಲೆ ಈ ಮೂಲಕ ಅಧಿಕೃತಗೊಳಿಸಿದ್ದೇನೆ ಮತ್ತು ಶಕ್ತಗೊಳಿಸಿದ್ದೇನೆ.

1. ಈ ಲೈಸೆನ್ಸನ್ನು ಯಾರೇ ಇತರ ವ್ಯಕ್ತಿಗೆ ವರ್ಗಾವಣೆ ಮಾಡತಕ್ಕದ್ದಲ್ಲ.
2. ಈ ಲೈಸೆನ್ಸನ್ನು, ಯಾರೇ ಲೈಸೆನ್ಸು ಕೊಡುವ ಪ್ರಾಧಿಕಾರಿಯು ಅಥವಾ ಲೇವಾದೇವಿದಾರರು ಮತ್ತು ಗಿರವಿದಾರರ ಇನ್‌ಸ್ಪೆಕ್ಟರ್ ಮತ್ತು ಅಂಥ ಅಧಿಕಾರಿಯು ತಗಾದೆ ಮಾಡಿದಾಗಲೆಲ್ಲ ಹಾಜರುಪಡಿಸತಕ್ಕದ್ದು.
3. ಲೈಸೆನ್ಸುದಾರನು ಲೈಸೆನ್ಸು ಕೊಟ್ಟ ಆವರಣದಿಂದ ಕೆಟ್ಟನಡತೆಯ ವ್ಯಕ್ತಿಗಳನ್ನು ಹೊರಗಿಡತಕ್ಕದ್ದು.
4. ಲೈಸೆನ್ಸುದಾರನು ಇಟ್ಟಿರುವ ಎಲ್ಲಾ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು ಮತ್ತು ದಸ್ತಾವೇಜುಗಳನ್ನು ಮತ್ತು ಅವನು ತೆಗೆದುಕೊಂಡಿರುವ ಎಲ್ಲಾ ಒತ್ತೆಗಳನ್ನು ಯಾರೇ ಲೈಸೆನ್ಸು ಕೊಡುವ ಪ್ರಾಧಿಕಾರಿ ಅಥವಾ ಲೇವಾದೇವಿದಾರರು ಗಿರವಿದಾರರ ಇನ್‌ಸ್ಪೆಕ್ಟರ್‌ರ ಪರಿಶೀಲನೆಗೆ ಮುಕ್ತವಾಗಿಡತಕ್ಕದ್ದು.
5. ಲೈಸೆನ್ಸುದಾರನು, ಅವನಲ್ಲಿ ಒತ್ತೆ ಇಟ್ಟಿರುವ ಯಾವುದೇ ವಸ್ತುವನ್ನು, ಲೈಸೆನ್ಸು ಕೊಡುವ ಪ್ರಾಧಿಕಾರಿಯ ಅಥವಾ ಲೇವಾದೇವಿದಾರರು ಮತ್ತು ಗಿರವಿದಾರರ ಇನ್‌ಸ್ಪೆಕ್ಟರರ ಬರಹದಲ್ಲಿನ ಅನುಮತಿ ಇಲ್ಲದೆ, ಯಾವ ಪಟ್ಟಣದಲ್ಲಿ ಅಥವಾ ಗ್ರಾಮದಲ್ಲಿ ಅವನು, ಗಿರವಿದಾರನ ವ್ಯವಹಾರವನ್ನು ನಡೆಸುತ್ತಿರುವನೋ ಆ ಪಟ್ಟಣದ ಅಥವಾ ಗ್ರಾಮದ ಹೊರಗೆ ಯಾವುದೇ ಸ್ಥಳಕ್ಕೆ ಸ್ಥಳಾಂತರಿಸತಕ್ಕದ್ದಲ್ಲ.
6. ಮೇಲ್ಕಂಡ ಯಾವುದೇ ಷರತ್ತಿನ ಉಲ್ಲಂಘನೆಯು, ಅಧಿನಿಯಮದ 18ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಂಡನೀಯವಾಗಿರತಕ್ಕದ್ದು.

---ರ-----ದಿವಸದಂದು ನನ್ನ ಸಹಿಯೊಡನೆ ಮತ್ತು ಮೊಹರಿನೊಡನೆ ಕೊಡಲಾಗಿದೆ, 10 ರೂಪಾಯಿ ಫೀಜು ಸಂದಾಯ ಆಗಿದೆ.

ಲೇವಾದೇವಿದಾರರ ರಿಜಿಸ್ಟ್ರಾರ್.
(ಲೈಸೆನ್ಸನ್ನು ಕೊಡುವ ಅಧಿಕಾರಿ).

**ನಮೂನೆ "ಸಿ"**

**(10ನೇ ನಿಯಮವನ್ನು ನೋಡಿ).**

**ಒಡೆಯನು ಒತ್ತೆಯನ್ನು ಕ್ಲೇಮು ಮಾಡಿದಾಗ ಮಾಡಬೇಕಾದ ಘೋಷಣೆ.**

ಈ ಘೋಷಣೆಯು, ಯಾವ ದಿವಸದಂದು ನಮೂನೆಯನ್ನು ಗಿರವಿದಾರನು ಅರ್ಜಿದಾರನಿಗೆ ಕೊಟ್ಟಿದ್ದಾನೆಯೋ ಆ ದಿವಸದ ತರುವಾಯ ಹದಿನೈದು ದಿವಸಗಳನ್ನು ಮೀರದಂತೆ ಘೋಷಣೆಯನ್ನು ಕ್ರಮಬದ್ಧವಾಗಿ ಮಾಡಿದ್ದ, ಗಿರವಿದಾರನಿಗೆ ವಾಪಸ್ಸು ಕೊಟ್ಟ ಹೊರತು ಪರಿಣಾಮಕಾರಿ ಯಾಗಿರತಕ್ಕದ್ದಲ್ಲ.

ಗಿರವಿದಾರನಿಗೆ ವಾಪಸ್ಸು ಕೊಡುವುದಕ್ಕಾಗಿ ಕೊನೆಯ ದಿವಸ.

ಅರ್ಜಿದಾರನಾಗಿಯೇ ಆಗಲಿ ಅಥವಾ ಅರ್ಜಿದಾರನನ್ನು ಗುರುತಿಸುವವನೆಂದಾಗಿಯೇ ಆಗಲಿ ಘೋಷಣೆಯನ್ನು ಅದು ಯಾವುದೇ ಮುಖ್ಯ ವಿವರದಲ್ಲಿ ಸುಳ್ಳಾಗಿರುವುದಾಗಿ ತಿಳಿದೂ ಮಾಡುವ ಯಾರೇ ವ್ಯಕ್ತಿಯು, ಅಧಿನಿಯಮದ 9ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ದಂಡನೀಯನಾಗುತ್ತಾನೆ.

---ದ-------ಆದ ನಾನು, ಕರ್ನಾಟಕ ಗಿರವಿದಾರರ ಅಧಿನಿಯಮ, 1961 (ಕರ್ನಾಟಕ ಅಧಿನಿಯಮ 1962ರ 13) ಕ್ಕನುಸಾರವಾಗಿ, ಈ ಕೆಳಗೆ ವಿವರಿಸಿರುವ ವಸ್ತು/ವಸ್ತುಗಳು ನನ್ನ ಸ್ವತ್ತು /ಸ್ವತ್ತುಗಳೆಂದು ಮತ್ತು ಅದನ್ನು/ಅವುಗಳನ್ನು------ದ ಅಂಗಡಿಯಲ್ಲಿ ಒತ್ತೆ ಇಟ್ಟಿರುವುದಾಗಿ ನಾನು ನಂಬಿರುತ್ತೇನೆಂದು ಶ್ರದ್ಧಾಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ ಘೋಷಿಸುತ್ತೇನೆ.

ಮೇಲೆ ಉಲ್ಲೇಖಿಸಿರುವ ವಸ್ತು/ವಸ್ತುಗಳು ಈ ಕೆಳಕಂಡ ವಿವರಣೆಯನ್ನು ಹೊಂದಿದೆ/ಹೊಂದಿವೆ:

ಒಡೆಯನ ರುಜು.
ಪದನಾಮ
ವಿಳಾಸ.

-----ಆದ ನಾನು, ಸದರಿ ಅಧಿನಿಯಮಕ್ಕನುಸಾರವಾಗಿ ........ಎಂದು, ಮೇಲ್ಕಂಡ ಘೋಷಣೆಯನ್ನು ಈಗ ಮಾಡುತ್ತಿರುವ ವ್ಯಕ್ತಿಯು ನನಗೆ ಗೊತ್ತಿದ್ದಾನೆಂದು ಶ್ರದ್ಧಾಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ ಘೋಷಿಸುತ್ತೇನೆ.

ಗುರುತಿಸುವ ವ್ಯಕ್ತಿಯ ರುಜು.
ಪದನಾಮ
ವಿಳಾಸ.

-----------ದ--------ದಿವಸದಂದು ನನ್ನ ಸಮಕ್ಷಮದಲ್ಲಿ ಘೋಷಿಸಲಾಗಿದೆ.

ಮ್ಯಾಜಿಸ್ಟ್ರೇಟ್ ಅಥವಾ ನ್ಯಾಯಾಧೀಶ.

**ನಮೂನೆ "ಡಿ"**

**(10ನೇ ನಿಯಮವನ್ನು ನೋಡಿ).**

**ಗಿರವಿ ಚೀಟಿಯು ಕಳೆದು ಹೋಗಿದ್ದರೆ ಘೋಷಣೆ, ಇತ್ಯಾದಿ.**

ಈ ಘೋಷಣೆಯು, ಯಾವ ದಿವಸದಂದು ಈ ನಮೂನೆಯನ್ನು ಗಿರವಿದಾರನು ಅರ್ಜಿದಾರನಿಗೆ ಕೊಟ್ಟಿದ್ದಾನೆಯೋ ಆ ದಿವಸದ ತರುವಾಯ ಹದಿನೈದು ದಿವಸಗಳನ್ನು ಮೀರದಂತೆ ಘೋಷಣೆಯನ್ನು ಕ್ರಮಬದ್ಧವಾಗಿ ಮಾಡಿದ್ದ, ಗಿರವಿದಾರನಿಗೆ ವಾಪಸ್ಸು ಕೊಟ್ಟ ಹೊರತು ಪರಿಣಾಮಕಾರಿಯಾಗತಕ್ಕದ್ದಲ್ಲ.

ಗಿರವಿದಾರನಿಗೆ ವಾಪಸ್ಸು ಕೊಡುವುದಕ್ಕಾಗಿ ಕೊನೆಯ ದಿವಸ.

ಅರ್ಜಿದಾರನಾಗಿಯೇ ಆಗಲಿ ಅಥವಾ ಅರ್ಜಿದಾರನನ್ನು ಗುರುತಿಸುವವನೆಂದಾಗಿಯೇ ಆಗಲಿ ಘೋಷಣೆಯನ್ನು ಅದು ಯಾವುದೇ ಮುಖ್ಯ ವಿವರದಲ್ಲಿ ಸುಳ್ಳಾಗಿರುವುದಾಗಿ ತಿಳಿದೂ ಮಾಡುವ ಯಾರೇ ವ್ಯಕ್ತಿಯು ಈ ಅಧಿನಿಯಮದ 9ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ದಂಡನೀಯನಾಗುತ್ತಾನೆ.

------ದ---ಆದ ನಾನು, ಕರ್ನಾಟಕ ಗಿರವಿದಾರರ ಅಧಿನಿಯಮ, 1961 (ಕರ್ನಾಟಕ ಅಧಿನಿಯಮ 1962ರ 13)ಕ್ಕನುಸಾರವಾಗಿ, ನನ್ನ ಸ್ವತ್ತಾಗಿರುವ ಕೆಳಗೆ ವಿವರಿಸಿರುವ ವಸ್ತು/ವಸ್ತುಗಳನ್ನು------ಗಿರವಿದಾರನ ಅಂಗಡಿಯಲ್ಲಿ ನಾನು ಒತ್ತೆ ಇಟ್ಟಿದ್ದೇನೆಂದು ಮತ್ತು ಅದಕ್ಕಾಗಿ ಗಿರವಿ ಚೀಟಿಯನ್ನು ಸ್ವೀಕರಿಸಿದ್ದು, ಅದು----ನು---ನಿಂದ ಮತ್ತು ನಾನು ಅಥವಾ ನಾನು ತಿಳಿದಿರುವ ಮತ್ತು ನಂಬಿರುವಷ್ಟರ ಮಟ್ಟಿಗೆ ಯಾರೇ ವ್ಯಕ್ತಿಗೆ ಆ ಗಿರವಿ ಚೀಟಿಯನ್ನು ಮಾರಾಟ ಮಾಡಿಲ್ಲವೆಂದು ಅಥವಾ ವರ್ಗಾವಣೆ ಮಾಡಿಲ್ಲವೆಂದು ಶ್ರದ್ಧಾಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ ಘೋಷಿಸುತ್ತೇನೆ.

ಮೇಲೆ ಉಲ್ಲೇಖಿಸಿರುವ ವಸ್ತು/ವಸ್ತುಗಳು ಈ ಕೆಳಕಂಡ ವಿವರಣೆಯನ್ನು ಹೊಂದಿದೆ/ಹೊಂದಿವೆ.

ಗಿರವಿ ಇಟ್ಟವನ ರುಜು.

----- ರ------ ಆದ ನಾನು, ಸದರಿ ಅಧಿನಿಯಮಕ್ಕನುಸಾರವಾಗಿ, ---------ಎಂದು ಮೇಲ್ಕಂಡ ಘೋಷಣೆಯನ್ನು ಈಗ ಮಾಡುತ್ತಿರುವ ವ್ಯಕ್ತಿಯು ನನಗೆ ಗೊತ್ತಿದ್ದಾನೆಂದು ಶ್ರದ್ಧಾಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ ಘೋಷಿಸುತ್ತೇನೆ.

ಗುರುತಿಸುವ ವ್ಯಕ್ತಿಯ ರುಜು.

ಪದನಾಮ

ವಿಳಾಸ.

-----ದ-----ದಿವಸದಂದು ನನ್ನ ಸಮಕ್ಷಮದಲ್ಲಿ ಘೋಷಿಸಲಾಗಿದೆ.

ಮ್ಯಾಜಿಸ್ಟ್ರೇಟ್ ಅಥವಾ ನ್ಯಾಯಾಧೀಶ.

**ನಮೂನೆ "ಇ"**

**(11ನೇ ನಿಯಮವನ್ನು ನೋಡಿ).**

**ಒತ್ತೆಯ ಪುಸ್ತಕ.**

ಗಿರವಿ ಇಟ್ಟವನ ಹೆಸರು.

ಪೂರ್ಣ ವಿಳಾಸ.

1. ಒತ್ತೆಯ ಸಂಖ್ಯೆ.
2. ಸಾಲದ ದಿನಾಂಕ.
3. ಸಾಲದ ಅಸಲಿನ ಮೊಬಲಗು.
4. ವಿಧಿಸಲಾದ ಬಡ್ಡಿಯ ದರ.
5. ಸಾಲವಾಗಿ ಸ್ವೀಕರಿಸಿದ ಪ್ರತಿಯೊಂದು ಸಂದಾಯದ ಮೊಬಲಗು ಮತ್ತು ದಿನಾಂಕ.
6. ವಸ್ತುಗಳ ಪೂರ್ಣ ಮತ್ತು ವಿವರವಾದ ವಿವರಣೆ (ಆಭರಣಗಳ ಸಂದರ್ಭದಲ್ಲಿ ತೂಕವನ್ನು ನಮೂದಿಸತಕ್ಕದ್ದು).
7. ವಸ್ತು ಅಥವಾ ವಸ್ತುಗಳ ಮೌಲ್ಯ.
8. ಗಿರವಿಯನ್ನು ಬಿಡಿಸಿಕೊಳ್ಳುವುದಕ್ಕಾಗಿ ಒಪ್ಪಿಕೊಂಡಿರುವ ಕಾಲ.
9. ಬಿಡಿಸಿಕೊಂಡ ಅಥವಾ ಹರಾಜಿನಲ್ಲಿ ಮಾರಾಟ ಮಾಡಿದ ದಿನಾಂಕ.
10. ಅವನು ಗಿರವಿ ಇಟ್ಟವನಾಗಿಲ್ಲದಿದ್ದರೆ, ಒಡೆಯನ ಹೆಸರು ಮತ್ತು ವಿಳಾಸ.
11. ಬಿಡಿಸಿಕೊಳ್ಳುವ ಅಥವಾ ಹರಾಜಿನ ಮಾರಾಟದಲ್ಲಿ ಖರೀದಿಸುವ ವ್ಯಕ್ತಿಯ ಹೆಸರು ಮತ್ತು ವಿಳಾಸ.

**ಟಿಪ್ಪಣಿ:-** ಪ್ರತಿ ಒತ್ತೆಗೆ ಸಂಬಂಧಿಸಿದಂತೆ 5,9 ಮತ್ತು 11ನೇ ಬಾಬುಗಳನ್ನು ಹೊರತುಪಡಿಸಿ ಒತ್ತೆ ಪುಸ್ತಕದಲ್ಲಿನ ಎಲ್ಲಾ ನಮೂದುಗಳನ್ನು ವ್ಯವಹಾರ ಮಾಡುವಾಗಲೇ ಏಕಕಾಲದಲ್ಲಿ ಮಾಡತಕ್ಕದ್ದು.

**ನಮೂನೆ "ಎಫ್"**

**(12ನೇ ನಿಯಮವನ್ನು ನೋಡಿ).**

**ಗಿರವಿ ಚೀಟಿ.**

ಒತ್ತೆಯ ಸಂಖ್ಯೆ.

ಗಿರವಿದಾರನ ಹೆಸರು ಮತ್ತು ವಿಳಾಸ.

ಗಿರವಿದಾರನ ಲೈಸೆನ್ಸಿನ ಸಂಖ್ಯೆ ಮತ್ತು ದಿನಾಂಕ.

ಈ ಕೆಳಕಂಡ ವಸ್ತು/ವಸ್ತುಗಳನ್ನು ನನ್ನ ಬಳಿ ಗಿರವಿ ಇಡಲಾಗಿದೆ/ವೆ.

1. ಗಿರವಿ ಇಟ್ಟವನ ಹೆಸರು ಮತ್ತು ಪೂರ್ಣ ವಿಳಾಸ.
2. ದಿನಾಂಕ.

3. ಸಾಲದ ಅಸಲಿನ ಮೊಬಲಗು.
4. ವಿಧಿಸಲಾದ ಬಡ್ಡಿಯ ದರ.
5. ವಸ್ತುಗಳ ಪೂರ್ಣ ಮತ್ತು ವಿವರವಾದ ವಿವರಣೆ.
(ಆಭರಣಗಳ ಸಂದರ್ಭದಲ್ಲಿ ತೂಕವನ್ನು ನಮೂದಿಸತಕ್ಕದ್ದು).
6. ವಸ್ತು ಅಥವಾ ವಸ್ತುಗಳ ಮೌಲ್ಯ.
7. ವಸ್ತುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ಒಪ್ಪಿಕೊಂಡಿರುವ ಕಾಲ.
8. ಗಿರವಿ ಇಟ್ಟವನ ರುಜು ಅಥವಾ ಹೆಬ್ಬೆರಳಿನ ಗುರುತು.

(ಗಿರವಿ ಇಟ್ಟವನ ರುಜು/ಅವನ ಹೆಬ್ಬೆರಳಿನ ಗುರುತು).
ಗಿರವಿದಾರನ ಅಥವಾ ಅವನ ಏಜೆಂಟನ ರುಜು.

**ಹಿಂಭಾಗ.**

1. ಯಾವುದೇ ಒತ್ತೆಯ ಮೇಲಿನ ಬಡ್ಡಿಯ ದರವು,-

(ಎ) ಒಂದು ವರ್ಷಕ್ಕೆ ಶೇಕಡಾ 18 ರಷ್ಟು ಸರಳ ಬಡ್ಡಿಯನ್ನು (ಎಂದರೆ ಇಪ್ಪತ್ತೈದು ರೂಪಾಯಿಗಳು ಮತ್ತು ಅದಕ್ಕಿಂತ ಕಡಿಮೆಯಾದ ಸಾಲಗಳ ಸಂದರ್ಭದಲ್ಲಿ ಒಂದು ತಿಂಗಳಿಗೆ ಒಂದು ರೂಪಾಯಿಗೆ 1.25 ಪೈಸೆ ಸರಳ ಬಡ್ಡಿ), ಮತ್ತು

(ಬಿ) ಒಂದು ವರ್ಷಕ್ಕೆ ಶೇಕಡಾ ಹದಿನೈದರಷ್ಟು ಸರಳ ಬಡ್ಡಿಯನ್ನು (ಎಂದರೆ ಇತರ ಸಂದರ್ಭಗಳಲ್ಲಿ ಒಂದು ತಿಂಗಳಿಗೆ ಒಂದು ರೂಪಾಯಿಗೆ 1.25 ಪೈಸೆ ಸರಳ ಬಡ್ಡಿ)

-ಮೀರತಕ್ಕದ್ದಲ್ಲ.

2. ಪ್ರತಿಯೊಂದು ಒತ್ತೆಯನ್ನು ಗಿರವಿ ಇಟ್ಟ ದಿವಸದಿಂದ ( ಆ ದಿವಸವನ್ನು ಹೊರತುಪಡಿಸಿ) ಒಂದು ವರ್ಷದ ಅವಧಿಯೊಳಗೆ ಅಥವಾ ಪಕ್ಷಕಾರರ ನಡುವಣ ಕರಾರಿನಲ್ಲಿ ಕಲ್ಪಿಸಬಹುದಾದಂಥ ಇನ್ನೂ ದೀರ್ಘವಾದ ಅವಧಿಯೊಳಗೆ ಬಿಡಿಸಿಕೊಳ್ಳಬಹುದಾಗಿರತಕ್ಕದ್ದು ಮತ್ತು ಅದನ್ನು ಸದರಿ ಅವಧಿಯ ಮುಂದೆ ಬರುವ ರಿಯಾಯಿತಿಯ ಏಳು ದಿವಸಗಳಲ್ಲಿ ಬಿಡಿಸಿಕೊಳ್ಳಬಹುದಾಗಿರುವುದು ಮುಂದುವರಿಯತಕ್ಕದ್ದು.

3. ಈ ಚೀಟಿಯ ಧಾರಕನನ್ನು, ಒತ್ತೆಯನ್ನು ಬಿಡಿಸಿಕೊಳ್ಳಲು ಹಕ್ಕುಳ್ಳವನಾದ ವ್ಯಕ್ತಿಯೆಂದು ಭಾವಿಸಬೇಕು.

4. ಈ ಚೀಟಿಯು, ಕಳೆದು ಹೋದರೆ, ಕೈಮರೆತು ಹೋಗಿದ್ದರೆ, ಹಾಳಾಗಿದ್ದರೆ ಅಥವಾ ಕಳುವು ಆಗಿದ್ದರೆ ಅಥವಾ ಗಿರವಿ ಇಟ್ಟವನಿಂದ ಅದನ್ನು ಮೋಸದಿಂದ ಪಡೆದುಕೊಂಡಿದ್ದರೆ, ಆ ಗಿರವಿ ಇಟ್ಟವನು, ಮ್ಯಾಜಿಸ್ಟ್ರೇಟನ ಅಥವಾ ನ್ಯಾಯಾಧೀಶನ ಮುಂದೆ ಮಾಡಬೇಕಾಗಿರುವ ಘೋಷಣೆಯ ಮುದ್ರಿತ ನಮೂನೆಯನ್ನು ಉಚಿತವಾಗಿ ಸರಬರಾಜು ಮಾಡುವುದಕ್ಕಾಗಿ ಕೂಡಲೇ ಗಿರವಿದಾರನಿಗೆ ಅರ್ಜಿ ಸಲ್ಲಿಸತಕ್ಕದ್ದು, ಅವನು, ಗಿರವಿದಾರನು ಆ ನಮೂನೆಯನ್ನು ಕೊಟ್ಟ ದಿನಾಂಕದ ತರುವಾಯ ಹದಿನೈದು ದಿವಸಗಳನ್ನು ಮೀರದಂತೆ ಅದನ್ನು ಭರ್ತಿ ಮಾಡತಕ್ಕದ್ದು ಮತ್ತು ಗಿರವಿದಾರನಿಗೆ ವಾಪಸ್ಸು ಕೊಡತಕ್ಕದ್ದು. ಗಿರವಿ ಇಟ್ಟವನು ಆ ತರುವಾಯ ಅವನು ಗಿರವಿ ಚೀಟಿಯನ್ನು ಹಾಜರುಪಡಿಸಿದ್ದಿದ್ದರೆ ಹೇಗೋ ಹಾಗೆ ಅವೇ ಹಕ್ಕುಗಳು ಮತ್ತು ಪರಿಹಾರೋಪಾಯಗಳನ್ನು ಹೊಂದಿರತಕ್ಕದ್ದು.

5. ಸಾಲವು ಇನ್ನೂರೈವತ್ತು ರೂಪಾಯಿಗಳನ್ನು ಮೀರಿರುವಲ್ಲಿ, ಆ ಅರ್ಜಿದಾರನು, ಗಿರವಿದಾರನಿಗೆ ಅರ್ಜಿಯನ್ನು ಸಲ್ಲಿಸುವುದಕ್ಕೆ ಮುಂಚೆ, ಈ ಕೆಳಕಂಡ ವಿವರಗಳನ್ನು ಒಳಗೊಂಡಿರುವ ನೋಟೀಸನ್ನು ಪ್ರಕಟಿಸುವಂತೆ ಮಾಡತಕ್ಕದ್ದು, ಎಂದರೆ:-

(ಎ) ಸಂಬಂಧಪಟ್ಟ ಗಿರವಿದಾರನ ಹೆಸರು, ವ್ಯವಹಾರದ ಸ್ಥಳ ಮತ್ತು ಲೈಸೆನ್ಸಿನ ಸಂಖ್ಯೆ;

(ಬಿ) ವಸ್ತುಗಳ ಪೂರ್ಣ ಮತ್ತು ವಿವರವಾದ ವಿವರಣೆ (ಆಭರಣಗಳ ಸಂದರ್ಭದಲ್ಲಿ ತೂಕವನ್ನು ನಮೂದಿಸತಕ್ಕದ್ದು);

(ಸಿ) ಗಿರವಿ ಇಟ್ಟವನ ಹೆಸರು ಮತ್ತು ವಿಳಾಸ; ಮತ್ತು

(ಡಿ) ಅರ್ಜಿದಾರನು, ಅವನ ಕ್ಲೇಮನ್ನು ಯಾವ ಆಧಾರದ ಮೇಲೆ ಮಾಡುವನೋ ಅಂಥ ಆಧಾರ, ಎಂದರೆ, ಒತ್ತೆಯ ಒಡೆಯ ಆದರೆ, ಗಿರವಿ ಚೀಟಿಯನ್ನು ಹೊಂದಿಲ್ಲ ಅಥವಾ ಗಿರವಿ ಚೀಟಿಯನ್ನು ಧಾರಣ ಮಾಡಲು ಹಕ್ಕುಳ್ಳವನೆಂದು ಕ್ಲೇಮು ಮಾಡುವ, ಆದರೆ, ಅದು ಕಳೆದು ಹೋಗಿದೆ, ಕೈಮರೆತು ಹೋಗಿದೆ, ಹಾಳಾಗಿದೆ, ಕಳುವು ಮಾಡಲಾಗಿದೆ ಅಥವಾ ಅವನಿಂದ ಮೋಸದಿಂದ ಪಡೆದುಕೊಳ್ಳಲಾಗಿದೆ ಎಂದು ಆಪಾದಿಸುವ ವ್ಯಕ್ತಿ.

ಅಂಥ ನೋಟೀಸನ್ನು, ಗಿರವಿದಾರನು, ಅವನ ವ್ಯವಹಾರವನ್ನು ನಡೆಸುತ್ತಿರುವ ಸ್ಥಳದಲ್ಲಿ ಪ್ರಚಾರದಲ್ಲಿರುವ ಮತ್ತು ಲೈಸೆನ್ಸು ಕೊಡುವ ಪ್ರಾಧಿಕಾರಿಯು ಅಥವಾ ಲೇವಾದೇವಿದಾರರ ಮತ್ತು ಗಿರವಿದಾರರ ಇನ್‌ಸ್ಪೆಕ್ಟರ್ ಅನುಮೋದಿಸಿದ ಸುದ್ದಿಪತ್ರಿಕೆಯಲ್ಲಿ ಎರಡು ನಿರಂತರ ದಿವಸಗಳಂದು ಪ್ರಕಟಿಸತಕ್ಕದ್ದು.

ಘೋಷಣೆಯ ನಮೂನೆಗಾಗಿ ಅರ್ಜಿಯನ್ನು ಆ ನೋಟೀಸಿನ ಪ್ರಕಟಣೆಯ ತರುವಾಯ 21 ದಿವಸಗಳ ತರುವಾಯ ಸಲ್ಲಿಸತಕ್ಕದ್ದು.

**ನಮೂನೆ "ಜಿ"**

**(12ನೇ ನಿಯಮವನ್ನು ನೋಡಿ).**

**ಒತ್ತೆಗಳ ಮಾರಾಟದ ಪುಸ್ತಕ.**

ಮಾರಾಟದ ದಿನಾಂಕ ಮತ್ತು ಸ್ಥಳ.
ಹರಾಜುದಾರನ ಹೆಸರು ಮತ್ತು ವ್ಯವಹಾರದ ಸ್ಥಳ.

1. ಒತ್ತೆಯ ಪುಸ್ತಕದಲ್ಲಿರುವ ಒತ್ತೆ ಸಂಖ್ಯೆ.
2. ಗಿರವಿ ಇಟ್ಟ ದಿನಾಂಕ.
3. ಗಿರವಿ ಇಟ್ಟವನ ಹೆಸರು.
4. ಸಾಲದ ಮೊಬಲಗು.
5. ಹರಾಜುದಾರನು ಹೇಳಿರುವಂತೆ ಒತ್ತೆಯು ಯಾವ ಮೊಬಲಗಿಗೆ ಮಾರಾಟ ಆಗಿದೆ.
6. ಹರಾಜುದಾರ ಅಥವಾ ಅವನ ಏಜೆಂಟನ ರುಜು.
7. ಖರೀದಿದಾರನ ಹೆಸರು ಮತ್ತು ವಿಳಾಸ.

**ನಮೂನೆ "ಎಚ್"**

**(12ನೇ ನಿಯಮವನ್ನು ನೋಡಿ).**

**ಒತ್ತೆಯನ್ನು ಬಿಡಿಸಿಕೊಂಡ ರಸೀದಿ.**

ದಿನಾಂಕ.

----------ಸಂಖ್ಯೆಯ ಒತ್ತೆಯನ್ನು ಬಿಡಿಸಿಕೊಂಡ ಇವರಿಂದ ಸಾಲದ ಮೊಬಲಗನ್ನು/ಬಡ್ಡಿಯನ್ನು-----ಸ್ವೀಕರಿಸಲಾಗಿದೆ.

ಒಟ್ಟು.

ಗಿರವಿದಾರ ಅಥವಾ ಅವನ ಏಜೆಂಟನ ರುಜು.

**ನಮೂನೆ "ಐ"**

**(12ನೇ ನಿಯಮವನ್ನು ನೋಡಿ).**

**ಗಿರವಿದಾರ ಅಥವಾ ಆತನ ಏಜೆಂಟನ ಪ್ರಮಾಣಪತ್ರ.**

ಮೇಲೆ ಹೇಳಿರುವುದು, -----(ದಿನಾಂಕದಂದು)----ನು, ತೆಗೆದುಕೊಂಡ-----ರೂ.ಗಳ ಸಾಲಕ್ಕಾಗಿ ಕರ್ನಾಟಕ ಗಿರವಿದಾರರ ಅಧಿನಿಯಮ,1961(ಕರ್ನಾಟಕ ಅಧಿನಿಯಮ 1962ರ 13) ಇದರ 10ನೇ ಪ್ರಕರಣದ (1) ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ಇಟ್ಟಿರುವ ಲೆಕ್ಕದ ಯಥಾಪ್ರತಿ ಎಂದು ಮತ್ತು ಆಸಸ ಲೆಕ್ಕದಲ್ಲಿ ಯಾವುದೇ ಬದಲಾವಣೆಗಳು ಅಥವಾ ಅಳಿಸುವಿಕೆಗಳು (ಈ ಕೆಳಕಂಡವನ್ನು ಹೊರತುಪಡಿಸಿ) ಇಲ್ಲವೆಂದು ನಾನು ಪ್ರಮಾಣೀಕರಿಸುತ್ತೇನೆ.

(1)

(2)

(3)

ಗಿರವಿದಾರನ ಅಥವಾ ಏಜೆಂಟನ ಸಹಿ.

The above translation of the Karnataka Pawn Brokers Act, 1961 (13 of 1962) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ದಕ್ಷಿಣಾಮೂರ್ತಿ**

ಪಿ.ಆರ್. 53 ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 64 ರಾಶಾಪ್ರ 2004, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2005**

ಕರ್ನಾಟಕ ಪೌರಸಭಾ ತೆರಿಗೆ ವಿಧಿಸುವಿಕೆ (ಕರ್ನಾಟಕ ವ್ಯಾಪ್ತಿ) ಅಧಿನಿಯಮ, 1973 (74ರ 13)ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

**ಪೌರಸಭಾ ತೆರಿಗೆ ವಿಧಿಸುವಿಕೆ (ಕರ್ನಾಟಕ ವ್ಯಾಪ್ತಿ) ಅಧಿನಿಯಮ, 1973**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**1974ರ ಅಧಿನಿಯಮ 13:** ಪೌರಸಭಾ ತೆರಿಗೆ ವಿಧಿಸುವಿಕೆ ಅಧಿನಿಯಮ, 1881 ಒಂದು ಕೇಂದ್ರ ಕಾನೂನಾಗಿದ್ದು, ಅದು ಹಿಂದಿನ 'ಬಿ' ಭಾಗದ ರಾಜ್ಯಗಳಲ್ಲಿ ಅಡಕವಾಗಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರ ಪ್ರದೇಶಗಳಲ್ಲಿ ಜಾರಿಯಲ್ಲಿದೆ. ಇದು, ಪೌರಸಭಾ ತೆರಿಗೆಗಳನ್ನು ವಿಧಿಸುವುದರಿಂದ ಸಶಸ್ತ್ರ ದಳಗಳ ಸಿಬ್ಬಂದಿಗೆ ವಿನಾಯಿತಿ ನೀಡುವ ಅಧಿಕಾರಗಳನ್ನು ಪ್ರದಾನ ಮಾಡುತ್ತದೆ. ಈ ಅಧಿನಿಯಮವನ್ನು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತಗೊಳಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 26 ನೇ ಫೆಬ್ರವರಿ 1973 ರಲ್ಲಿ ಸಂಖ್ಯೆ 177 ಎಂಬುದಾಗಿ ಪ್ರಕಟಿಸಲಾಗಿದೆ)

**1974ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 13**

**(1974ರ ಮೇ ಒಂಬತ್ತನೇ ದಿನದಂದು ಕರ್ನಾಟಕ ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಗಿದೆ)**

**ಪೌರಸಭಾ ತೆರಿಗೆ ವಿಧಿಸುವಿಕೆ ([1][ಕರ್ನಾಟಕ][1] ವ್ಯಾಪ್ತಿ) ಅಧಿನಿಯಮ, 1973**

(1974ರ ಏಪ್ರಿಲ್ ಇಪ್ಪತ್ತೇಳನೇ ದಿನದಂದು ರಾಜ್ಯಪಾಲರ ಅನುಮೋದನೆ ಪಡೆಯಲಾಗಿದೆ)

ಪೌರಸಭಾ ತೆರಿಗೆ ವಿಧಿಸುವಿಕೆ ಅಧಿನಿಯಮ, 1881ನ್ನು ಇಡೀ [1][ಕರ್ನಾಟಕ][1] ರಾಜ್ಯಕ್ಕೆ ವ್ಯಾಪ್ತಗೊಳಿಸಲು ಉಪಬಂಧಿಸುವ ಒಂದು ಅಧಿನಿಯಮ.

ಪೌರಸಭಾ ತೆರಿಗೆ ವಿಧಿಸುವಿಕೆ ಅಧಿನಿಯಮ, 1881ನ್ನು (1881ರ ಕೇಂದ್ರ ಅಧಿನಿಯಮ 11) ಇಡೀ [1][ಕರ್ನಾಟಕ][1] ರಾಜ್ಯಕ್ಕೆ ವ್ಯಾಪ್ತಗೊಳಿಸಲು ಉಪಬಂಧಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಇಪ್ಪತ್ತನಾಲ್ಕನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು ಪೌರಸಭಾ ತೆರಿಗೆ ವಿಧಿಸುವಿಕೆ ([1][ಕರ್ನಾಟಕ][1] ವ್ಯಾಪ್ತಿ) ಅಧಿನಿಯಮ, 1973 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ][1] ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ಕೂಡಲೇ ಜಾರಿಗೆ ಬರತಕ್ಕದ್ದು.

2. **ಪೌರಸಭಾ ತೆರಿಗೆ ವಿಧಿಸುವಿಕೆ ಅಧಿನಿಯಮ, 1881ನ್ನು ಇಡೀ [1][ಕರ್ನಾಟಕ][1] ರಾಜ್ಯಕ್ಕೆ ವ್ಯಾಪ್ತಗೊಳಿಸುವುದು:-** (1) ಪೌರಸಭಾ ತೆರಿಗೆ ವಿಧಿಸುವಿಕೆ ಅಧಿನಿಯಮ, 1881ನ್ನು (1881ರ ಕೇಂದ್ರ ಅಧಿನಿಯಮ 11) (ಇದರಲ್ಲಿ ಇನ್ನು ಮುಂದೆ ವ್ಯಾಪ್ತಿಗೊಳಿಸಲಾದ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಈ ಮೂಲಕ ಇಡೀ [1][ಕರ್ನಾಟಕ][1] ರಾಜ್ಯಕ್ಕೆ ವ್ಯಾಪ್ತಗೊಳಿಸತಕ್ಕದ್ದು ಮತ್ತು ಅದು ಇಡೀ [1][ಕರ್ನಾಟಕ][1] ರಾಜ್ಯದಲ್ಲಿ ಜಾರಿಗೆ ಬರತಕ್ಕದ್ದು.

(2) (1) ನೇ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ವ್ಯಾಪ್ತಗೊಳಿಸಲಾದ ಅಧಿನಿಯಮದ 1ನೇ ಪ್ರಕರಣದಲ್ಲಿ "ಬಿ ಭಾಗದ ರಾಜ್ಯಗಳಲ್ಲಿ" ಎಂಬ ಪದಗಳು ಮತ್ತು ಅಕ್ಷರದ ತರುವಾಯ "ರಾಜ್ಯಗಳ ಪುನರ್‌ವಿಂಗಡಣೆ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 37) 7ನೇ ಪ್ರಕರಣದ (1) ನೇ ಉಪ ಪ್ರಕರಣದ (ಎ) ಖಂಡ ಮತ್ತು (ಸಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ರಾಜ್ಯ ಕ್ಷೇತ್ರಗಳನ್ನು ಹೊರತುಪಡಿಸಿ" ಎಂಬ ಪದಗಳು, ಆವರಣಗಳು, ಅಂಕಿಗಳು ಮತ್ತು ಅಕ್ಷರಗಳನ್ನು ಸೇರಿಸತಕ್ಕದ್ದು.

3. **ವ್ಯಾಪ್ತಗೊಳಿಸಲಾದ ಅಧಿನಿಯಮವನ್ನು ಅರ್ಥೈಸುವಲ್ಲಿ ನ್ಯಾಯಾಲಯಗಳು ಮತ್ತು ಇತರ ಪ್ರಾಧಿಕಾರಗಳ ಅಧಿಕಾರಗಳು:-** ಯಾವುದೇ ನ್ಯಾಯಾಲಯ ಅಥವಾ ಇತರ ಪ್ರಾಧಿಕಾರವು, ವ್ಯಾಪ್ತಗೊಳಿಸಲಾದ ಅಧಿನಿಯಮವನ್ನು ಇಡೀ [1][ಕರ್ನಾಟಕ][1] ರಾಜ್ಯಕ್ಕೆ ಅನ್ವಯಿಸಲು ಅನುಕೂಲ ಮಾಡಿಕೊಡುವ ಉದ್ದೇಶಕ್ಕಾಗಿ, ನ್ಯಾಯಾಲಯ ಅಥವಾ ಇತರ ಪ್ರಾಧಿಕಾರದ ಮುಂದಿರುವ ವಿಷಯಕ್ಕೆ ಅದನ್ನು ಅಳವಡಿಸಲು ಮುಖ್ಯ ವಿಷಯಕ್ಕೆ ಬಾಧಕವಾಗದಂತೆ ಅವಶ್ಯಕ ಮತ್ತು ಯುಕ್ತವಾಗಬಹುದಾದಂಥ ಬದಲಾವಣೆಗಳೊಂದಿಗೆ ಅದನ್ನು ಅರ್ಥೈಸಬಹುದು.

---

1. 1978ರ ಅಧಿನಿಯಮ 21 ರ ಮೂಲಕ 15.09.1978ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

* * *

The above translation of the municipal Taxation (Karnataka extention) Act, 1973 (13 of 1974) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ದಕ್ಷಿಣಾಮೂರ್ತಿ**

ಪಿ.ಆರ್. 54 ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ.

## WATER RESOURCES SECRETARIAT

**NOTIFICATION No. WRD 74 PWC 2004, Bangalore, dated: 22nd January 2005**

Whereas the draft of the followed rules further to Karnataka Public works engineering Department Services (Absorption of work Charged Establishment Employees) (Special) Rules 2003 was published as required by sub Section (2) of Section 3 of the Karnataka Civil Services Act, 1978 (Karnataka Act, 14 of 1990) in Notification No. WRD 205 PWC 2001, dated 20.2.2004 in Part-IV-A of the karnataka Gazette Extra-ordinary dated: 15.07.2004 inviting objections and suggestions from persons likely to be affected thereby within thirty days from the date of its publication in the Official Gazette.

and whereas the said Gagette was made available to the public on 15.07.2004 and whereas the No objections and suggestions have been received by the Government.

Now, therefore, in exercise of the Powers conferred by sub-section (i) of section 3 read with Section 8 of the Karnataka State Civil Services Act, 1978 (Karnataka Act, 14 of 1990) the Government of Karnataka hereby makes amend the special rules, hereby.

**RULES**

1. **Title and commencement:** (1) These rules may be called Karnataka Public Works Engineering Department Services (Absorption of Work Charged Establishment Employees) (Special) (Amendment) Rules, 2003.

(2) It shall come into force from the date of their publication in the Official Gazette.

**2. Amendment of Schedule:** In the Schedule to the Karnataka Public Works Engineering Department Services (Absorption of Work Charged Establishment Employees) (Special) Rules, 1997 after serial number 307 and entries relating there to, the following serial number and the entries relating there to shall and shall be deemed always to have been inserted, namely:

**"CHIEF ENGINEER M.I.(S) BANGALORE"**

**307A Sri, Halappa Reddy Helper Rs.2500-3850.**

By Order and in the name of the Governor of Karnataka,

**C.M. HUGAR**

P.R. 52

Under Secretary to Government,

Water Resources Department (Services-B).

**COMMERCE & INDUSTRIES SECRETARIAT**

**NOTIFICATION No. CI 76 MMM 2002, Bangalore, dated: 13th January 2005**

In pursuance of sub-section (2) of Section 8 of the Mines and Minerals (Development and Regulation) Act 1957, the Government of Karnataka hereby accords sanction for Second renewal of Mining Lease No.1625 for a period of 20 years (Twenty years only) w.e.f. 21.09.1993 in favour of Smt. K.M. Parvathamma, Parvatinagar, Bellary for Iron ore over an area of 15.24 hectares (Fifteen point two four hectares only) in D.M. Block, Rajapur village, Sandur Taluk, Bellary District, as per the sketch furnished by the Director of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as amended from time to time and other applicable Acts and Rules including Forest (Conservation) Act, 1980 and rules made there under.

Since the Forest clearance is up to 03.02.2010, the renewal of this Mining lease is also subject to obtaining Forest clearance under Section 2 of Forest Conservation Act, 1980, for the remaining period of the Lease and the terms and conditions appended hereto.

By Order and in the name of the Governor of Karnataka,

**A.B. SIDDHANTI**

Under Secretary to Government (Mines),

Commerce & Industries Department.

**TERMS AND CONDITIONS OF THE SECOND RENEWAL OF MINING LEASE NO.1625 SANCTIONED IN GOVERNMENT NOTIFICATION NO. CI 76 MMM 2002 Dated: 13.01.2005**

a) Mining lease should be in respect of Iron Ore only. If other minerals are found in association with Iron Ore, they should be brought to the notice of Government and if the lessee desires to mine these minerals along with Iron Ore, he/she/it should do so only after the consent of Government is obtained in writing.

b) If beml or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D&R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forest land.

h) Government shall have the right of purchasing the ore at current market rates.

i) The lease would be determined if the lessee fails to commence execution of the lease deed.

j) The area mentioned above is subject to verification after actual survey and demarcation.

k) The lease shall be for a period of Twenty Years w.e.f. 21.09.1993.

l) The lessee/s shall pay dead rent cesses and royalty as detailed below:-

**DEAD RENT PAYABLE PER HECTARE PER ANNUM**

| | | |
|---|---|---|
| Ist year of the lease | : | Nil |
| 2nd year to 5th year of the lease | : | Not applicable. |
| 6th year to 10th year of the lease | : | Not applicable. |
| 11th year of the lease & onwards | : | Rs.200/- |

**Surface Rent:** Rs.2.50 per hectare per annum on the area used by the lessee/s for mining purposes.

**Local & other Cesses:** As prevalent in Bellary District

**Royalty:** At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**A.B. SIDDHANTI**
P.R. 24 Under Secretary to Government (Mines),
Commerce & Industries Department.

**HOME SECRETARIAT**

**NOTIFICATION No. HD 3 PCR 2005, Bangalore, Dated: 19th January 2005**

In pursuance of the Provisions contained in section 6of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of Ulsoorgate PS Cr.No.354/02 offences punishable under Section 463, 464, 465, 468, 471, 419 and 420 IPC against unknown persons for their fraudulent acts, and any other public servants or persons, in relation to, or in connection with the said offences, and any other offences committed in the course of the transaction arising out of the same fact, in regard to this case, within the whole State of Karnataka.

By Order and in the name of the Governor of Karnataka,
P.R. 28 **R.A. KULKARNI**
Under Secretary to Government, Home Department (Crimes).

**ಕಾರ್ಮಿಕ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಕಾಇ 11 ಕಾಬಾನಿ 99, ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 11 ಕಾಬಾನಿ 99, ದಿನಾಂಕ: 23.8.2004ರ ಅಧಿಸೂಚನೆಯ ಕ್ರಮ ಸಂಖ್ಯೆ: 1 ರಲ್ಲಿ

"1) ಉಪ ವಿಭಾಗಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಸದಸ್ಯರು"

ಎಂಬುದರ ಬದಲಾಗಿ

"1) ಉಪ ವಿಭಾಗಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಅಧ್ಯಕ್ಷರು"

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿಮಲಾಕುಮಾರಿ**
ಪಿ.ಆರ್. 38 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಒಸಾಇ 347 ಪಿಎಂಎಸ್ 2002, ಬೆಂಗಳೂರು, ದಿನಾಂಕ: 15ನೇ ಜನವರಿ 2005**

1872 ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಫಾಸ್ಟರ್ ಕೆ. ಯಶವಂತ, ದಿ. ಕರ್ನಾಟಕ ಸರ್ವೋದಯ ಆಶ್ರಮ ನಂ.432, 9ನೇ ಕ್ರಾಸ್, 10ನೇ ಮುಖ್ಯ ರಸ್ತೆ, ಹೆಚ್.ಬಿ.ಆರ್. ಲೇಔಟ್, ಹೆಣ್ಣೂರು, ಬೆಂಗಳೂರು-560043, ಇವರಿಗೆ ಮೇಲಿನ ಕಾಯ್ದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಅನುಮತಿಯನ್ನು ಈ ಮೂಲಕ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಬಸವರಾಜು**
ಪಿ.ಆರ್. 39 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ರಹದಾರಿ ಮತ್ತು ವಿದೇಶಿಯರು).

**ಸಾರಿಗೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಾರಿಇ 105 ವಾಈಮ 2004, ಬೆಂಗಳೂರು, ದಿನಾಂಕ: 24ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 82 ಆಸೇವ 2004, ದಿನಾಂಕ: 21.12.2004 ರನ್ವಯ ನೇಮಕಾತಿ ನಿರೀಕ್ಷಣೆಯಲ್ಲಿರುವ ಶ್ರೀ ಬಿ.ಸಿ. ಚಂದ್ರಶೇಖರ, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಇವರ ಸೇವೆಯನ್ನು ಶ್ರೀ ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್, ಬೆಂಗಳೂರು

ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಹೆಚ್.ಡಿ. ಬಾಲಕೃಷ್ಣೇಗೌಡ ಅವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ ನೇಮಿಸುವ ಸಲುವಾಗಿ ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ವಶಕ್ಕೆ ನೀಡಲಾಗಿದೆ.

ಶ್ರೀ ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್‌ನ ನಿಯಮಾವಳಿಯ ನಿಯಮ 8(ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಕಂಪನಿಯ ನಿರ್ದೇಶಕರ ಮಂಡಳಿಗೆ ಶ್ರೀ ಬಿ.ಸಿ. ಚಂದ್ರಶೇಖರ, ಕರ್ನಾಟಕ ಆಡಳಿತ ಸೇವೆ (ಆಯ್ಕೆ ಶ್ರೇಣಿ) ಇವರನ್ನು ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

ಶ್ರೀ ಬಿ.ಸಿ. ಚಂದ್ರಶೇಖರ ರವರನ್ನು ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಲು ನಿಯಮ 13 ರಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಕಂಪನಿಯ ನಿರ್ದೇಶಕರ ಮಂಡಳಿಗೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಹರಿಹರಸ್ವಾಮಿ**

ಪಿ.ಆರ್. 40 ಪೀಠಾಧಿಕಾರಿ, ಸಾರಿಗೆ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಇ 370 ಎಂಆರ್ಇ 2004 (ಭಾಗ 2), ಬೆಂಗಳೂರು, ದಿನಾಂಕ: 27ನೇ ಜನವರಿ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 370 ಎಂಆರ್ಇ 2004 (ಭಾಗ-1) ದಿನಾಂಕ: 19.01.2005ನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 41 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## LAW SECRETARIAT

### NOTIFICATION No. LAW 05 LAC 2004, Bangalore, dated: 19th January 2005

In exercise of the powers conferred under section 8 of the Industrial Disputes Act 1947, (Act XIV of 1947) and as proposed by the Registrar General, High Court of Karnataka, Vide their letter No GOB(I)/1/2004 dated: 18.12.2004. The Government of Karnataka hereby appoints the Presiding Officer of the Industrial Tribunal, Hubli as the Presiding Officer of the Labour Court Hubli and Additional Labour Court, Hubli, concurrently with immediate effect and until further orders.

By Order and in the name of the Governor of Karnataka,

**CHIKKAHANUMANTHAIAH**

P.R. 42 Under Secretary to Government, Law Department (Admn-I).

## ಸಹಕಾರ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್‌ಎಸ್ 2005 (ಭಾಗ), ಬೆಂಗಳೂರು, ದಿನಾಂಕ: 28ನೇ ಜನವರಿ 2005

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಶೆಟ್ಟಿಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಶೆಟ್ಟಿಹಳ್ಳಿ ಇದರ ಆಡಳಿತ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಕೆ.ಎನ್. ಶಂಕರೇಗೌಡ ಬಿನ್ ನಿಂಗೇಗೌಡ (ಶಕುನಿಗೌಡ), ಕರಡಕೆರೆ.
2. ಶ್ರೀಮತಿ ಚಿಕ್ಕತಾಯಮ್ಮ ಕೋಂ ಎಸ್.ಬಿ. ಹನುಮಂತೇಗೌಡ, ಶೆಟ್ಟಿಹಳ್ಳಿ.
3. ಶ್ರೀ ಪುಟ್ಟಲಿಂಗಯ್ಯ ಬಿನ್ ನಿಂಗಯ್ಯ, ಅರೇಚಾಕನಹಳ್ಳಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 44 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 153 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 12ನೇ ಜನವರಿ 2005

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾವೇರಿ ಜಿಲ್ಲೆ ಸವಣೂರು ತಾಲ್ಲೂಕಿನ ಕುಣಿಮೆಳ್ಳಿಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಕುಣಿಮೆಳ್ಳಿಹಳ್ಳಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಖೈರುನ್ನಿಸಾ ಕೋಂ ಅಬ್ದುಲ್ ಹಮೀದಸಾಬ್ ನದಾಫ.
2. ಶ್ರೀ ಸೋಮನಗೌಡ ಫಕೀರಗೌಡ ಮಾಳ್ಳಂನವರ ಸಾ: ಮನ್ನಂಗಿ.
3. ಶ್ರೀ ಶಾಂತಪ್ಪ ಉಡಚಪ್ಪ ಬಸನಾಯ್ಕರ, ಸಾ: ಮೆಳ್ಳಾಗಟ್ಟಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 45 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**HEALTH AND FAMILY WELFARE SECRETARIAT**

**NOTIFICATION No. HFW 431 CGE 2004, Bangalore, dated: 29th January 2005**

In exercise of the powers conferred by clauses (vii) and (viii) (a) of section-2, section-8 and sub-section (i) of section-9 of the Prevention of Food Adulterations Act 1954 (Central Act 37 of 1954) the Government of Karnataka, hereby make the following amendments to the Schedule in Notification No. HFW 86 CGE 2003, dated 28.3.2003.

**SCHEDULE**

| Sl. No. | Local Area | Local (Health) Authority | Public Analyst | Food Inspectors Medical Officer |
|---|---|---|---|---|
| 1 | Bangalore Mahanagara Palike. | Chief Health Officer, Bangalore Mahanagara Palike Bangalore | Chief Chemist Bangalore Mahanagara Palike Bangalore | Food Inspectors/Medical Officers of Health working in 30 ranges of Bangalore Mahanagara Palike, Bangalore. |

01. In accordance with provision under section-2 sub-section (vii) of PFA Act 1954, the Local area against Sl.No.2 of the Schedule for Corporation of the City of Bangalore, shall be substituted as Bangalore Mahanagara Palike, Bangalore.
02. For the entries against column No.(3) of the Schedule as per section-2, sub-section (vii) (a) Local (health) Authority, for Health Officer of the Bangalore City Corporation (excluding HAL area) shall be substituted as the Chief Health Officer, Bangalore Mahanagara Palike, Bangalore.
03. For the entries against column (4) of the Schedule as per section-8 of P.F.A. Act 1954, Public Analyst for Chemist, Bangalore City Corporation, Bangalore shall be substituted as The Chief Chemist, Bangalore Mahanagara Palike, Bangalore.
04. For the entries against column (5) of Schedule as per section-9 of P.F.A. Act 1954, the Food Inspectors, Bangalore City Corporation, shall be substituted as the Food Inspectors/Medical Officers, Bangalore Mahanagara Palike, Bangalore, who are qualified as per rules 8(iii) proviso 8(c) of the P.F.A. Act 1954 and Rules 1955 thereunder.

By Order and in the name of the Governor of Karnataka,

**S.R. SHANKAR**

P.R. 46

Under Secretary to Government,

Health and Family Welfare Department.

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಂಇ 07 ಎಲ್‌ಆರ್‌ಎಂ 2005. ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2005**

ತೊಗಟ ವೀರ ಕ್ಷತ್ರಿಯ ಸಂಘಗಳ ಮಹಾಮಂಡಳಿ (ರಿ), ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲೂಕು, ತೂಬಗೆರೆ ಹೋಬಳಿ, ತಿರುಮ ಗೊಂಡನಹಳ್ಳಿ ಗ್ರಾಮದ ಸರ್ವೆ ನಂ. 181/2-ಎ ರಲ್ಲಿ 0.20 ಎಕರೆ, 182 ರಲ್ಲಿ 3.10 ಎಕರೆ ಮತ್ತು 184 ರಲ್ಲಿ 1.10 ಎಕರೆ ಒಟ್ಟು: 5.00 ಎಕರೆ ಜಮೀನನ್ನು ಗುರುಪೀಠ ಸ್ಥಾಪನೆಯ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ:ಎಲ್‌ಆರ್‌ಎಫ್/ಸಿಆರ್/25/04-05, ದಿನಾಂಕ 20.11.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1)(iii) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಎಸ್.ಓ.ಆರ್ ನಕಲಿನ ಸಂಖ್ಯೆ:699/2003-04 ದಿನಾಂಕ 22.3.2004 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪಿ.ಟಿ.ಸಿ.ಎಲ್ ಕಾಯ್ದೆಗೆ ಒಳಪಡುವುದಿಲ್ಲ. ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು, ಒ.ಡಿ.ಪಿ./ ಸಿ.ಡಿ.ಪಿ. ವ್ಯಾಪ್ತಿ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1)(iii)ರ ಪ್ರಕಾರ ಧಾರ್ಮಿಕ ಮತ್ತು ದತ್ತಿ ಉದ್ದೇಶಕ್ಕೆ ಒಂದು ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995 ರ ಕಲಂ 109(1)(iii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996 ರ ನಿಯಮ 38(ಬಿ) ಮತ್ತು (ಸಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲೂಕು, ತೂಬಗೆರೆ ಹೋಬಳಿ, ತಿರುಮಗೊಂಡನಹಳ್ಳಿ ಗ್ರಾಮದ ಸರ್ವೆ ನಂ. 181/2-ಎ ರಲ್ಲಿ 0.20 ಎಕರೆ, 182 ರಲ್ಲಿ 3.10 ಎಕರೆ ಮತ್ತು 184 ರಲ್ಲಿ 1.10 ಎಕರೆ ಒಟ್ಟು 5.00 ಎಕರೆ ಜಮೀನನ್ನು ತೊಗಟ ವೀರ ಕ್ಷತ್ರಿಯ ಸಂಘಗಳ ಮಹಾಮಂಡಳಿ (ರಿ), ಬೆಂಗಳೂರು ಇವರಿಗೆ ಗುರುಪೀಠ ಸ್ಥಾಪನೆಯ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1)(iii) ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷ ಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸ ತಕ್ಕದ್ದು.

(5) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ನೀಡಲು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ವಿರುತ್ತದೆ.

(6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದು ಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ನರಸಿಂಹಮೂರ್ತಿ**

ಪಿ.ಆರ್. 47 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

**ಅಧಿಸೂಚನೆ ಸಂಖ್ಯೆ: ಕಂಇ 10 ಎಲ್‌ಆರ್‌ಎಂ 2005. ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2005**

ಶ್ರೀ ಅಹಲ್ಯಾದೇವಿ ಮಾರಮ್ಮನ ಪೂಜಾ ಸೇವಾ ಟ್ರಸ್ಟ್, ಆರತಿ ಉಕ್ಕುಡ ಇವರು ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲೂಕು, ಕೆ.ಶೆಟ್ಟಹಳ್ಳಿ ಹೋಬಳಿ, ಕಡತನಾಳು ಗ್ರಾಮದ ಸರ್ವೆ ನಂ. 95 ರಲ್ಲಿ 0.32 ಎಕರೆ ಜಮೀನನ್ನು ದೇವಸ್ಥಾನದ ಅಭಿವೃದ್ಧಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ:ಎಲ್‌ಆರ್‌ಎಫ್/ಸಿಆರ್/47/2004, ದಿನಾಂಕ 23.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಜಮೀನನ್ನು ಖರೀದಿಸಲು ಸದರಿ ಟ್ರಸ್ಟ್‌ಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1)(iii) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಉಪ ನೋಂದಣಾಧಿಕಾರಿ, ಶ್ರೀರಂಗಪಟ್ಟಣ ಇವರಲ್ಲಿ ದಿನಾಂಕ 19.2.1990 ರಂದು ನೋಂದಾಯಿಸಲ್ಪಟ್ಟಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪಿ.ಟಿ.ಸಿ.ಎಲ್ ಕಾಯ್ದೆಗೆ ಒಳಪಡುವುದಿಲ್ಲ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು, ಒ.ಡಿ.ಪಿ./ಸಿ.ಡಿ.ಪಿ. ವ್ಯಾಪ್ತಿ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1)(iii)ರ ಪ್ರಕಾರ ಧಾರ್ಮಿಕ ಮತ್ತು ದತ್ತಿಗೆ ಒಂದು ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995 ರ ಕಲಂ 109(1)(iii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮುಗಳು, 1996 ರ ನಿಯಮ 38(ಬಿ) ಮತ್ತು (ಸಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಮಂಡ್ಯ ಜಿಲ್ಲೆ, ಶ್ರೀರಂಗ ಪಟ್ಟಣ ತಾಲೂಕು, ಕೆ.ಶೆಟ್ಟಹಳ್ಳಿ ಹೋಬಳಿ, ಕಡತನಾಳು ಗ್ರಾಮದ ಸರ್ವೆ ನಂ. 95 ರಲ್ಲಿ 0.32 ಎಕರೆ ಜಮೀನನ್ನು ಖರೀದಿಸಲು ಶ್ರೀ ಅಹಲ್ಯಾದೇವಿ ಮಾರಮ್ಮನ ಪೂಜಾ ಸೇವಾ ಟ್ರಸ್ಟ್, ಆರತಿ ಉಕ್ಕುಡ ಇವರು ದೇವಸ್ಥಾನದ ಅಭಿವೃದ್ಧಿ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1)(iii) ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷ ಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿ ಸತಕ್ಕದ್ದು.

(5) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ನೀಡಲು ಮಾತ್ರವಾಗಿರುತ್ತದೆ. ಇತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ವಿರುತ್ತದೆ.

(6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದು ಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ನರಸಿಂಹಮೂರ್ತಿ**

ಪಿ.ಆರ್. 48 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

**ಅಧಿಸೂಚನೆ ಸಂಖ್ಯೆ: ಕಂಇ 34 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 29ನೇ ಜನವರಿ 2005**

ರಾಮಕೃಷ್ಣ ತಪೋವನ (97/3-2, 2ನೇ ಮಹಡಿ, 13ನೇ ಕ್ರಾಸ್, 8ನೇ ಮುಖ್ಯ ರಸ್ತೆ, ವಿಲ್ಸನ್ ಗಾರ್ಡನ್), ಬೆಂಗಳೂರು ಇವರು ಬಂಟ್ವಾಳ ತಾಲ್ಲೂಕು, ಕರಿಯಂಗಳ ಗ್ರಾಮದ ಸರ್ವೆ ನಂ. 39/3 ರಲ್ಲಿ 1.20 ಎಕರೆ ಮತ್ತು 39/4 ರಲ್ಲಿ 1.45 ಎಕರೆ ಒಟ್ಟು 2.65 ಎಕರೆ ಜಮೀನನ್ನು ರಾಮಕೃಷ್ಣ ತಪೋವನ ಟ್ರಸ್ಟಿಗೆ ಆಧ್ಯಾತ್ಮಕ ಕೇಂದ್ರ ಮತ್ತು ಧ್ಯಾನ ಮಂದಿರ ಸ್ಥಾಪಿಸುವ ಉದ್ದೇಶಕ್ಕೆ ಜಮೀನು ಖರೀದಿಸಲು

ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್ (2) 46/03-04, ದಿನಾಂಕ: 1.10.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 2.65 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ, ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು, ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ರಾಮಕೃಷ್ಣ ತಪೋವನ (97/3-2, 2ನೇ ಮಹಡಿ, 13ನೇ ಕ್ರಾಸ್, 8ನೇ ಮುಖ್ಯ ರಸ್ತೆ, ವಿಲ್ಸನ್‌ಗಾರ್ಡನ್), ಬೆಂಗಳೂರು ಇವರು ಬಂಟ್ವಾಳ ತಾಲ್ಲೂಕು, ಕರಿಯಂಗಳ ಗ್ರಾಮದ ಸರ್ವೆ ನಂ39/3 ರಲ್ಲಿ 1.20 ಎಕರೆ ಮತ್ತು 39/4 ರಲ್ಲಿ 1.45 ಎಕರೆ **ಒಟ್ಟು 2.65 ಎಕರೆ** ಜಮೀನನ್ನು ರಾಮಕೃಷ್ಣ ತಪೋವನ ಟ್ರಸ್ಟಿಗೆ ಆಧ್ಯಾತ್ಮಿಕ ಕೇಂದ್ರ ಮತ್ತು ಧ್ಯಾನ ಮಂದಿರ ಸ್ಥಾಪಿಸುವ ಉದ್ದೇಶಕ್ಕೆ ಜಮೀನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ / ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ / ಅಭಿವೃದ್ಧಿ ಪ್ರಾಧಿಕಾರ / ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ನರಸಿಂಹಮೂರ್ತಿ**

ಪಿ.ಆರ್. 49 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

**PERSONNEL AND ADMINISTRATIVE REFORMS SECRETARIAT**

**NOTIFICATION No. DPAR 330 SAS 2003 (Part), Bangalore, dated: 4th February 2005**

In pursuance of Government of India, Department of Personnel & Training, New Delhi's Notification No.13017/32/2003-AIS(I) dated: 24.01.2005 transferring Smt. Pooja Kulkarni, IAS (RR:03) from IAS Cadre of Karnataka to the IAS Cadre of Tamilnadu (Third Cadre), Smt Pooja Kulkarni, IAS (RR:03) is relieved from Karnataka cadre with inmmediate effect with instructions to report to Chief Secretary to Government of Tamilnadu, forthwith.

By Order and in the name of the Governor of Karnataka,

**K. SUDHAKARA SHETTY**

P.R. 50 Under Secretary to Government, DPAR (Services-1).